# ಮಾನಸಿ

**ಡಿಸೆಂಬರ್ 2004** ತಿಂಗಳ ಪತ್ರಿಕೆ

- ಅಂತಃ ಕರಣದೊಳಗಿನ ಅಂತಃ ಸತ್ವ
- 'ಬರ್ಮಿಂಗ್‌ಹ್ಯಾಂ ನ ಕಥನ'
- ಜಾಹಿರಾತುಗಳಲ್ಲಿ ಮಹಿಳಾ ಪ್ರತಿನಿಧೀಕರಣ
- ಆಸ್ರಮದಾಗೆ ಊಟ ಸಿಕ್ತದಾ ?
- ಮಹಿಳಾಚಳವಳಿಯ ಕೆಲವು ಅಘೋಷಿತ ಗುರಿಗಳು
- ಬದುಕಿನ ಕೇರಿಯಲ್ಲಿ ಒಂದು ಸುತ್ತು...
- ಅಪ್ಪನಿಗಾಗಿ / ಮೀರಾ ನಾನಲ್ಲ

ಮಾನಸ ತಿಂಗಳ ಪತ್ರಿಕೆ ಡಿಸೆಂಬರ್ 2004
ಸಂಪುಟ : 19 ಸಂಚಿಕೆ : 8



ವಿಳಾಸ :
"ಮಾನಸ" ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ - ಪೋಸ್ಟ್
ಬೆಂಗಳೂರು - 560 067

ಸೂಚನೆ : ಸೂಚನೆ : ಬಿಡಿಪ್ರತಿ 10-00 ರೂ.
ವಾರ್ಷಿಕ ಚಂದಾ 100-00 ರೂ.
ಸಂಸ್ಥೆಗಳಿಗೆ 150-00 ರೂ.

* ಒಂದು ವಿಶೇಷಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು

## ಈ ಸಂಚಿಕೆಯಲ್ಲಿ.....



**ಮೈಸೂರು**

ಮೈಸೂರಿನಲ್ಲಿ ಓದುಗರು ಮಾನಸ ಪ್ರತಿಗಳಿಗಾಗಿ ಹಾಗೂ ಚಂದಾ ನವೀಕರಣಕ್ಕಾಗಿ ಸಂಪರ್ಕಿಸಿ
ವೆಂ.ವನಜ : 2329, 12ನೇ ಮೇನ್, 2ನೇ ಹಂತ ವಿಜಯನಗರ, ಮೈಸೂರು - 570 017

ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ,
ಪಂಚಾಯಿತಿ ರಸ್ತೆ, ಕಾಡುಗೋಡಿ-ಅಂಚೆ, ಬೆಂಗಳೂರು - 560 067

# 'ಬರ್ಮಿಂಗ್‌ಹ್ಯಾಂ ನ ಕಥನ'

ರಾಜೇಶ್ವರಿ

ಡುಡ್ಲೆ ರ್‍ಯಾನ್‌ಡಾಲ್ 1914ರಲ್ಲಿ ವಾಷಿಂಗ್‌ಟನ್ ಡಿ.ಸಿ.ನಲ್ಲಿ ಹುಟ್ಟಿದರು. ಇವರು ವೇನ್ ಸ್ಟೇಟ್ ಮತ್ತು ಮಿಚಿಗನ್‌ನ ವಿಶ್ವವಿದ್ಯಾನಿಲಯದಲ್ಲಿ ಪದವಿ ಹೊಂದಿದವರು. ಡೆಟ್ರಾಯಿಟ್ ವಿಶ್ವವಿದ್ಯಾನಿಲಯದಲ್ಲಿ ಲೈಬ್ರರಿಯನ್ ಆಗಿ ಹಾಗೂ ಅಲ್ಲಿಯೇ ನೆಲೆಸಿರುವ ಕವಿಯಾಗಿ ಕೆಲಸ ಮಾಡುತ್ತಿದ್ದಾರೆ. ಇವರು 'ಬ್ರಾಡ್ ಸೈಡ್ ಪ್ರೆಸ್' ಎನ್ನುವ ಒಂದು ಸಣ್ಣ ಪ್ರಕಾಶನ ಸ್ಥಾಪಿಸಿದ್ದಾರೆ. 1971ರಲ್ಲಿ 'ದಿ ಬ್ಲ್ಯಾಕ್ ಪೊಯಟ್ಸ್' ಎಂಬ ಕವನ ಸಂಕಲನವನ್ನು ಸಂಗ್ರಹಿಸಿದ್ದಾರೆ.

'ಬರ್ಮಿಂಗ್‌ಹ್ಯಾಂ ಸಂಡೇ' ಕುರಿತ ಇವರ 'ಬ್ಯಾಲೆಡ್ ಆಫ್ ಬರ್ಮಿಂಗ್‌ಹ್ಯಾಂ'ನ ಅನುವಾದದೊಂದಿಗೆ ಘಟನೆಯ ವಿವರಗಳನ್ನು ಕುರಿತು ಇಲ್ಲಿ ಬರೆಯಲಾಗಿದೆ.

ಸೆಪ್ಟೆಂಬರ್ 15, 1963 ರಂದು ಬರ್ಮಿಂಗ್‌ಹ್ಯಾಂನ ಬ್ಯಾಪ್ಟಿಸ್ಟ್ ಚರ್ಚಿನಲ್ಲಿ ಒಂದು ಬಾಂಬ್ ಸ್ಫೋಟಗೊಂಡಿತು. ಇಲ್ಲಿ ಸೇರಿದ್ದವರೆಲ್ಲ ಕರಿಯರೇ. ಆದಿನ ಭಾನುವಾರದ ಶಾಲೆ ಚರ್ಚಿನಲ್ಲಿ ನಡೆಯುತ್ತಿತ್ತು. ಈ ಬಾಂಬ್ ಸ್ಫೋಟದಿಂದ ನಾಲ್ಕು ಜನ ಹುಡುಗಿಯರು ಸ್ಥಳದಲ್ಲಿಯೇ ಮೃತರಾದರು. ಒಬ್ಬರು ಕಣ್ಣು ಕಳೆದುಕೊಂಡಿದ್ದಲ್ಲದೇ ಹನ್ನೆರಡಕ್ಕೂ ಹೆಚ್ಚು ಮಂದಿ ಮಕ್ಕಳು ಗಾಯಗೊಂಡಿದ್ದರು. ಈ ದಿನವನ್ನು 'ಬರ್ಮಿಂಗ್ ಹ್ಯಾಂ ಸಂಡೇ' ಎಂದು ಕರೆಯಲಾಗುತ್ತದೆ ಹಾಗೂ ಅಮೇರಿಕಾದ ನಾಗರಿಕ ಹಕ್ಕುಗಳ ಚಳುವಳಿಗಳು ಇದನ್ನು 'ಬ್ಲಡಿಯಸ್ಟ್ ಸಂಡೆ' ಎಂದೇ ಕರೆಯುತ್ತಾರೆ.

ಮುದ್ದು ಅಮ್ಮ ಹೋಗಲಾ ನಾ ನಗರದೊಳಕ್ಕೆ
ಹೋಗುವ ಬದಲು ಹೊರಕ್ಕೆ ಆಟವಾಡುವುದಕ್ಕೆ
ಸಾಗುತ್ತೇನೆ ಬಮಿಂಗ್ ಹ್ಯಾಂ ನ ಬೀದಿಗಳಲ್ಲಿ
ಸ್ವಾತಂತ್ರ್ಯದ ಈ ದಿನದ ಮೆರವಣಿಗೆಯಲ್ಲಿ

ಬೇಡ, ಮಗೂ, ಬೇಡ, ಹೋಗಬಾರದು ನೀನು
ಕ್ರೂರ ಹಾಗೂ ಭಯಂಕರವಾಗಿವೆ ನಾಯಿಗಳು
ದೊಣ್ಣೆ, ಬಂದೂಕು, ಜೈಲು
ಒಳಿತಲ್ಲ ಪುಟ್ಟ ಮಗುವಿಗೆ.

ಆದರೆ ಏಕಾಂಗಿಯಲ್ಲ ಅಮ್ಮ ನಾನು
ಇರುತ್ತಾರೆ ನನ್ನೊಡನೆ ಇತರ ಮಕ್ಕಳು
ಹೋಗುತ್ತೇನೆ ಮೆರವಣಿಗೆ ಬರ್ಮಿಂಗ್ ಹ್ಯಾಂನ
ಬೀದಿಗಳಲ್ಲಿ
ವಿಮೋಚನೆಗೊಳಿಸಲು ನಮ್ಮ ದೇಶವನ್ನು.

ಬೇಡ, ಮಗು, ಬೇಡ, ನೀನು ಹೋಗಬಾರದು,
ಭಯ ನನಗೆ - ಬಂದೂಕುಗಳು ಗುಂಡು ಹಾರಿಸುತ್ತವೆ
ಬದಲಾಗಿ ಹೋಗು ನೀನು ಚರ್ಚಿಗೆ
ಅಲ್ಲಿ ಹಾಡು ಮಕ್ಕಳ ಗಾಯನದ ಗುಂಪಿನಲ್ಲಿ.

ಆಕೆಯ ರಾತ್ರಿ ಕತ್ತಲಿನಂತಹ ಕೂದಲನ್ನು ಬಾಚಿದಳು
ತಿದ್ದಿದಳು
ಗುಲಾಬಿ ಎಳೆಯ ಸುಗಂಧದಲ್ಲಿ ಮಾಡಿದಳು ಸ್ನಾನ
ಆಕೆಯ ಕಂದು ಬಣ್ಣದ ಪುಟ್ಟ ಕೈಗಳಿಗೆ ಎಳೆದಳು ಕೈ ಚೀಲ
ಆಕೆಯ ಪಾದಗಳಿಗೆ ತೊಡಿಸಿದಳು ಬಿಳಿಯ ಶೂಗಳ
ನಕ್ಕಿದ್ದಳು ತಾಯಿ ತನ್ನ ಮಗು ಇದೆಯೆಂದು
ಪವಿತ್ರವಾದ ನೆಲೆಯಲ್ಲಿ
ಆದರದು ಕೊನೆಯ ನಗುವಾಗಿ
ಮೂಡಿತ್ತು ಆಕೆಯ ಮುಖದ ಮೇಲೆ.

ಬಾಂಬಿನ ಸಿಡಿಲು ಆಕೆಗೆ ಕೇಳಿಸಿತ್ತು
ನೀರಾಗಿ, ಕ್ರೂರವಾಗಿದ್ದವು ಆಕೆಯ ಕಣ್ಣುಗಳು
ಬರ್ಮಿಂಗ್‌ಹ್ಯಾಂನ ರಸ್ತೆಯುದ್ದಕ್ಕೂ ಓಡಿದಳು ಆಕೆ
ಕೂಗುತ್ತ ಆಕೆಯ ಮಗುವನ್ನು

ಗಾಜಿನ ಹಾಗೂ ಇಟ್ಟಿಗೆಯ ಚೂರುಗಳಲ್ಲಿ
ಹುಡುಕಾಡಿದಳು ಆಕೆ
ಎತ್ತಿದ್ದಳೊಂದು ಶೂ ಕೊನೆಗೆ
"ಓ" ! ನನ್ನ ಮಗುವಿನ 'ಶೂ' ಇಲ್ಲದೆ
ಆದರೆ ಮಗು ನೀನೆಲ್ಲಿದ್ದೀಯ ?".

ಲೆಥಲ್ ಡೈನಮೈಟ್ - ಸೆಪ್ಟೆಂಬರ್ 15, 1963ರ ಭಾನುವಾರದಂದು ಬರ್ಮಿಂಗ್ ಹ್ಯಾಂನ ಅಲಭಾಮಾ ನಗರದಲ್ಲಿ ದುಃಖ ಹಾಗೂ ನಾಚಿಕೆಯನ್ನು ಹುಟ್ಟು ಹಾಕಿತ್ತು. ಪ್ರಪಂಚದ ಮುಖ್ಯ ನಗರದಲ್ಲಿ ನಡೆದ ಜನಾಂಗ ದ್ವೇಷದ ಈ ಬಾಂಬ್ ಸ್ಫೋಟ ಅತ್ಯಂತ ನಿಗೂಢವಾಗಿತ್ತು. ಕರಿಯರಿಗೆ ಸೇರಿದ್ದ ಬ್ಯಾಪ್ಟಿಸ್ಟ್ ಚರ್ಚಿನಲ್ಲಿ 9:22 ರ ಸಮಯದಲ್ಲಿ ಬಾಂಬು ಸ್ಫೋಟಗೊಂಡಿತ್ತು.

ದಕ್ಷಿಣದಲ್ಲಿ ಕರಿಯರ ಚರ್ಚುಗಳನ್ನು ಸುಡುತ್ತಿದ್ದವರು ಸಾಮಾನ್ಯವಾಗಿ ಬಿಳಿಯರು, ಪುರುಷರು, ಯುವಕರಾಗಿರುತ್ತಿದ್ದರು. ಇವರು ಸಾಮಾನ್ಯವಾಗಿ ಆರ್ಥಿಕವಾಗಿ ಹಿಂದುಳಿದವರು, ಮಧ್ಯದಲ್ಲಿಯೇ ಶಾಲೆ ಬಿಟ್ಟವರು, ಕುಡಿತಕ್ಕೆ ಒಳಗಾದವರು, ಅಥವಾ ಡ್ರಗ್ ಸೇವಿಸುವವರಾಗಿರುತ್ತಿದ್ದರು. ಇವರು ಯಾವುದೇ

ದ್ವೇಷ ಸಾಧಿಸುವ ಗುಂಪುಗಳಿಗೆ ಸೇರಿರದಿದ್ದರೂ, ಜನಾಂಗ ದ್ವೇಷ ಹೊಂದಿದವರು. ಬಂಧಿತರಾದ ಅಪರಾಧಿಗಳ ಮೂಲಕ ಇಂತಹ ವಿಚಾರಗಳು ತಿಳಿದು ಬಂದಿದೆ.

1963ರಲ್ಲಿ ಬಾಂಬ್ ಸ್ಫೋಟಗೊಂಡಾಗ 16ನೇ ಬೀದಿ ಬ್ಯಾಪ್ಟಿಸ್ಟ್ ಚರ್ಚ್, ಬರ್ಮಿಂಗ್ ಹ್ಯಾಂ ಅಲಾಮ್‌ನಲ್ಲಿ ಸತ್ತ ನಾಲ್ಕು ಜನ ಕರಿಯ ಹುಡುಗಿಯರ ಹಿನ್ನೆಲೆ ಹೀಗಿದೆ :

### ಕ್ಯಾರೊಲ್ ಡೆನೀಸ್ ಮ್ಯಾಕ್‌ನೇಯರ್

ಈಕೆ ಫೋಟೋ ಅಂಗಡಿಯ ಯಜಮಾನ ಕ್ರಿಸ್ ಹಾಗೂ ಶಾಲಾ ಶಿಕ್ಷಕಿಯಾಗಿದ್ದ ಮ್ಯಾಕ್ಸ್‌ನ್ ಮ್ಯಾಕ್ ನಾಯರ್‌ರ ಮೊದಲ ಮಗಳು. ಆಕೆಯ ಜೊತೆಗಾರರು ಆಕೆಯನ್ನು ನೀಸಿ ಎಂದೇ ಕರೆಯುತ್ತಿದ್ದರು.

ಈಕೆ ಸ್ವಭಾವತಃ ಕುತೂಹಲಕಾರಿ ಹುಡುಗಿ. ಬಿಳಿಯ ಮಕ್ಕಳಿಗೆ ಸಿಗುವಂತೆ ಒಂದೇ ಕೌಂಟರ್‌ನಲ್ಲಿ ತನಗೂ ಏಕೆ ಸ್ಯಾಂಡ್‌ವಿಚ್ ಸಿಗುವುದಿಲ್ಲವೆಂದು ಆಕೆಗೆ ಅರ್ಥವೇ ಆಗುತ್ತಿರಲಿಲ್ಲ ಈಕೆ ಸೆಂಟರ್ ಸ್ಟ್ರೀಟ್‌ನಲ್ಲಿದ್ದ ಎಲಿಮೆಂಟರಿ ಸ್ಕೂಲ್‌ನ ವಿದ್ಯಾರ್ಥಿನಿಯಾಗಿದ್ದಳು. ಆಗಾಗ್ಗೆ ಟೀ ಪಾರ್ಟಿ ಮಾಡುತ್ತಿದ್ದಳು. ಬೇಲ್ ಬಾಲ್ ಆಡುತ್ತಿದ್ದಳು. ಪೀಡಿಯಾಟ್ರಿಶಿಯನ್ ಆಗುವ ಕನಸು ಕಂಡಿದ್ದ ಈಕೆ ಅಕ್ಕ-ಪಕ್ಕದ ಮಕ್ಕಳನ್ನು ಸೇರಿಸಿ 'ರೂಪಕ' ತಯಾರಿಸಿ ಆಡಿಸುವುದು, ಡ್ಯಾನ್ಸ್ ಮಾಡುವುದು, ಪದ್ಯ ಓದುವುದು-ಇಂತಹವುಗಳನ್ನು ಮಾಡುತ್ತಿದ್ದಳು. ಇವೆಲ್ಲವನ್ನು ದೊಡ್ಡ ಪ್ರಮಾಣದಲ್ಲಿ ಮಾಡಿ, Muscular dystrophy ಗೆ ಹಣ ಕೊಡಿಸಲು ಪ್ರಯತ್ನಿಸುತ್ತಿದ್ದಳು.

ಡೈನೀಸ್‌ಳ ವೇದಿಕೆ ಹಾಗೂ ಆಕೆಯ ಪ್ರದರ್ಶನ ನೋಡಲು ಜನ ಕುತೂಹಲದಿಂದ ನೆರೆಯುತ್ತಿದ್ದರು. ಮಕ್ಕಳು ತಮ್ಮ ಹತ್ತಿರವಿದ್ದ ಬಿಡಿಗಾಸನ್ನು ಆಕೆಗೆ ನೀಡುತ್ತಿದ್ದರು. ವಯಸ್ಕರ ದೊಡ್ಡ ಪ್ರಮಾಣದಲ್ಲಿಯೇ ಆಕೆಗೆ ಸಹಾಯವೆಸಗುತ್ತಿದ್ದರು. ಮಸ್ಕುಲರ್ ಡೈಸ್ಟ್ರೋಫಿ ಗೆ ಹಣ ಎತ್ತುವುದು ಡೈನೀಸ್‌ಳ ಒಂದು ಕಾರ್ಯಕ್ರಮವಾಗಿತ್ತು. ಈಕೆಗೆ ಹಣ ಸಹಾಯ ನೀಡಲು ಯಾರೂ ತಿರಸ್ಕರಿಸುತ್ತಿರಲಿಲ್ಲ. ಈಕೆ ಹುಟ್ಟಿದ್ದು ನವೆಂಬರ್ 17, 1951 ರಂದು. ಈಕೆ ಸತ್ತಾಗ ಈಕೆಗೆ 11 ವರ್ಷ ವಯಸ್ಸಾಗಿತ್ತು.

### ಸಿನ್‌ಥಿಯ ವೆಸ್‌ಲಿ

ಈಕೆ ಹುಟ್ಟಿದ್ದು ಎಪ್ರಿಲ್ 30, 1949 ರಂದು. ಸಿಂಥಿಯಾ ವೆಸ್ಲೆ ಶಿಕ್ಷಕರಾಗಿದ್ದ ಕ್ಲೌಡ್ ಹಾಗೂ ಜರ್‌ಟ್ರೂಡ್‌ರ ಮೊದಲ ಸಾಕು ಮಗಳು ಸಿಂಥಿಯಾ ಪುಟ್ಟ ಹುಡುಗಿಯಾಗಿದ್ದಳು. ಚಿಕ್ಕ ಮುಖ 2ನೇ ನಂಬರ್‌ನ ಅಳತೆಯ ಉಡುಪು ಧರಿಸುವವಳಾಗಿದ್ದಳು. ಸಿಂಥಿಯಾ ತಾಯಿ ಆಕೆಯ ಉಡುಪು ಸಿದ್ಧ ಪಡಿಸುತ್ತಿದ್ದರು. ಅದು ಆಕೆಯ ಸಪೂರ ದೇಹಕ್ಕೆ ಚನ್ನಾಗಿ ಹೊಂದುತ್ತಿತ್ತು. ಸಿಂಥಿಯ ಈಗ ಅಸ್ತಿತ್ವದಲ್ಲಿರದ ಬಲಮಾನ್ ಪ್ರೌಢಶಾಲೆಯಲ್ಲಿ ಓದುತ್ತಿದ್ದಳು. ಆಕೆ ಗಣಿತದಲ್ಲಿ, ಓದುವಿಕೆಯಲ್ಲಿ ಹಾಗೂ ಬ್ಯಾಂಡ್‌ನಲ್ಲಿ ಮುಂದೆ ಇದ್ದಳು. ಆಕೆಯ ಮನೆಯ ಹಿಂದಿನ ಜಾಗದಲ್ಲಿ ಆಕೆ ಪಾರ್ಟಿ ಏರ್ಪಡಿಸುತ್ತಿದ್ದಳು. ಆಕೆ ಅಲ್ಲಿ ಹಾಡುತ್ತಿದ್ದಳು ನಂತರ ತಿಂಡಿ-ತೀರ್ಥ ನೀಡುತ್ತಿದ್ದಳು.

ಸಿನ್‌ಥಿಯ ಚರ್ಚಿನಲ್ಲಿ ಬಾಂಬ್ ಸ್ಫೋಟದಲ್ಲಿ ಸತ್ತಾಗ ಆಕೆ ತುಂಬ ಚಿಕ್ಕವಳಿರುವಾಗ ಮಿಸೆಸ್ ಸ್ಯಾವೇಜ್ ಕೊಟ್ಟಿದ್ದ ಉಂಗುರವನ್ನು ಧರಿಸಿದ್ದಳು. ಸಿಂಥಿಯಾಳ ತಂದೆ ಆಕೆ ಧರಿಸಿದ ಉಂಗುರದಿಂದ ಆಕೆಯನ್ನು ಶವಾಗಾರದಲ್ಲಿ ಗುರುತಿಸಿದರು. ಈಕೆ ಸತ್ತಾಗ ಈಕೆಗೆ 14 ವರುಷವಾಗಿತ್ತು.

### ಕ್ಯಾರೋಲ್ ರಾಬರ್ಟಸನ್

ಈಕೆ ಜನಿಸಿದ್ದು ಎಪ್ರಿಲ್ 24, 1949. ಕ್ಯಾರೋಲ್ ರಾಬರ್ಟ್‌ಸನ್ ಆಲ್ಫ ಹಾಗೂ ಆ್ಯಲ್‌ವಿನ್ ರಾಬರ್ಟಸನ್‌ರವರ ಮೂರನೆಯ ಮಗು. ದೊಡ್ಡವರು ಡಯಾನ್ ಹಾಗೂ ಆಲ್‌ವಿನ್. ಆಕೆಯ ತಂದೆ ಎಲಿಮೆಂಟರಿ ಶಾಲೆಯಲ್ಲಿ ಬ್ಯಾಂಡ್ ಮಾಸ್ತರ್ ಆಗಿದ್ದರು. ಆಕೆಯ ತಾಯಿ ಒಬ್ಬ ಲೈಬ್ರರಿಯನ್. ಕ್ಯಾರೋಲ್‌ಳ ತಾಯಿ ಒಳ್ಳೆಯ ಓದುಗಾರ್ತಿ, ನೃತ್ಯಗಾತಿ ಹಾಗೂ ಕ್ಲಾರಿನೆಟ್ ಪ್ಲೇಯರ್ ಕೂಡಾ ಹೌದು. ಕ್ಯಾರೋಲ್ ಒಳ್ಳೆಯ ಓದುಗಾರಳಾಗಿದ್ದಳು. ಈಕೆ 'A' ಗ್ರೇಡ್ ವಿದ್ಯಾರ್ಥಿನಿ. ಅಮೇರಿಕಾದ ಜಾಕ್ ಆ್ಯಂಡ್ ಜಿಲ್ ಶಾಲೆಯವಳು. ಹುಡುಗಿಯರ ಸ್ಕೌಟ್ಸ್, ಪಾರ್ಕರ್ ಹೈಸ್ಕೂಲ್‌ನ ಮಾರ್ಚಿಂಗ್ ಬ್ಯಾಂಡ್ ಹಾಗೂ ವಿಜ್ಞಾನ ಕ್ಲಬ್‌ನಲ್ಲಿ 'ಎ' ವಿದ್ಯಾರ್ಥಿನಿಯಾಗಿದ್ದಳು. ಗುಂಪು ಗಾಯನದಲ್ಲಿ ಕೂಡಾ ಹಾಡುತ್ತಿದ್ದಳು. ಕ್ಯಾರೋಲ್ ಸ್ಮಿತ್‌ಫೀಲ್ಡ್ ಮನೆಯಲ್ಲಿ ಬೆಳೆದವಳು. ಇಲ್ಲಿ ಪ್ರೀತಿಯಿತ್ತು, ನಗುವಿತ್ತು, ಗೆಳೆಯ, ಗೆಳತಿಯರಿದ್ದರು, ಒಳ್ಳೆಯ ಅಡುಗೆ ಇತ್ತು, ವಿಶೇಷವಾಗಿ ಆಕೆಯ ತಾಯಿ ಮಾಡುತ್ತಿದ್ದ ಸ್ಪಗಟಿ. ಈಕೆ ಸತ್ತಾಗ ಈಕೆಗೆ ಕೂಡಾ 14 ವರ್ಷವಾಗಿತ್ತು.

1976 ರಲ್ಲಿ ಚಿಕಾಗೋನಲ್ಲಿ - ಇಲ್ಲಿಯೇ ವಾಸಿಸುತ್ತಿದ್ದ ಕ್ಯಾರೋಲ್ ರಾಬರ್ಟ್‌ಸನ್‌ಳ ನೆನಪಿಗಾಗಿ ಕ್ಯಾರೋಲ್ ರಾಬರ್ಟ್‌ಸನ್ ಸೆಂಟರ್ ಫಾರ್ ಲರ್ನಿಂಗ್ ಎನ್ನುವ ಸಂಸ್ಥೆಯನ್ನು ಸ್ಥಾಪಿಸಲಾಗಿದೆ. ಇದು ಸಾಮಾಜಿಕ ಸೇವೆಯ ಸಂಸ್ಥೆಯಾಗಿದ್ದು ಮಕ್ಕಳಿಗೆ ಹಾಗೂ ಅವರ ಕುಟುಂಬದವರಿಗೆ ಸೇವೆ ಸಲ್ಲಿಸುತ್ತದೆ. ಕ್ಯಾರೋಲ್‌ಳ ಹೆಸರಿನಲ್ಲಿರುವ ಈ ಸಂಸ್ಥೆಯನ್ನು ನಾಲ್ಕೂ ಜನ ಹುಡುಗಿಯರ ನೆನಪಿಗೆ ಅರ್ಪಿಸಲಾಗಿದೆ.

ಅಡಿ ಮೇ ಕೊಲೈನ್ಸ್

ಈಕೆ ಎಪ್ರಿಲ್ 18 ರಂದು ಹುಟ್ಟಿದಳು. ಈಕೆ ತಂದೆ-ತಾಯಿಯರ ಏಳು ಮಕ್ಕಳಲ್ಲಿ ಒಬ್ಬಳು. ಈಕೆಯ ತಂದೆ ಆಸ್ಕರ್ ಕೊಲಿನ್ಸ್ ಒಬ್ಬ ಜಾನಿಟರ್. ತಾಯಿ ಆ್ಯಲಿಸ್ ಒಬ್ಬ ಗೃಹಿಣಿ. ಅಡಿ ಮೇ ಕುಟುಂಬದವರು ಅತ್ಯಂತ ಕಡುಬಡವರು. ಆ ಸಂದರ್ಭದಲ್ಲಿ ಚರ್ಚಿನ ಮುಖ್ಯಸ್ಥರಾಗಿದ್ದು ಆಗಿದ್ದ ರೆವರೆಂಡ್ ಜಾನ್ ಕ್ರಾಸ್‌ರ ಪ್ರಕಾರ 'ಆಕೆಯಲ್ಲಿ ಬಹಳ ವಸ್ತುಗಳು ಇರಲಿಲ್ಲವೆಂಬುದು ಸತ್ಯ, ಆದರೆ ಆಕೆ ಮೌನಿ ಹಾಗೂ ಸ್ವೀಟ್ ಹುಡುಗಿಯಾಗಿದ್ದಳು ? ಸಾರಾ - ಉದಯೋನ್ಮುಖ ಕಲಾವಿದೆಯ ಪ್ರಕಾರ' ಆಕೆ ಜನರನ್ನು ಚೆನ್ನಾಗಿ ಚಿತ್ರಿಸುತ್ತಿದ್ದಳು'. ಮನೆಯಲ್ಲಿ ಆರು ಜನ ಮಕ್ಕಳ ಮಧ್ಯೆ ಜಗಳವಾದರೆ ಅಡಿ ಶಾಂತಿದೂತಳಾಗಿರುತ್ತಿದ್ದಳು. ಈಕೆ ಹಿಲ್ ಎಲಿಮೆಂಟರಿ ಶಾಲೆಯ $8^{th}$ ಗ್ರೇಡರ್. ಚಂಡಿನ ಆಟವಾಡುವಾಗ ಪಿಚ್ ಹಾಕುವುದು ಈಕೆಗೆ ಇಷ್ಟ.

ಪ್ರತಿ ಎರಡನೆಯ ಶನಿವಾರ ಹಾಗೂ ಮೂರನೆಯ ಭಾನುವಾರ ಇಸ್ಲೂದ ರಸ್ತೆಯಲ್ಲಿನ ಚರ್ಚಿನಲ್ಲಿರುವ ಅಡಿ ಮೇ ಕೊಲಿಯನ್ಸ್ 'ಯೂತ್ ಸೆಂಟರ್'ನಲ್ಲಿ ಮಕ್ಕಳು ಸೇರುತ್ತಾರೆ. ಬದುಕಿನ ಬಗ್ಗೆ ನೇತ್ಯಾತ್ಮಕ ನಡತೆ, ಪ್ರತಿಭೆ ಬೆಳೆಸಿಕೊಳ್ಳುವುದು ಹಾಗೂ ಅಪಾಯಗಳನ್ನು ಎದುರಿಸುವುದನ್ನು ಕಲಿಯುವುದು ಇಲ್ಲಿಯ ಮುಖ್ಯ ಉದ್ದೇಶ . ಇದು ಆಕೆಯ ನೆನಪಿನ ಜೊತೆಗೆ ದುಃಖದಲ್ಲಿರುವ ಇತರ ಮಕ್ಕಳಿಗೆ ಸಹಾಯ ಎಸಗುವುದೂ ಆಗಿದೆ ಎಂದು ಆಕೆಯ ಅಕ್ಕನ ಮಗಳು ಮಿಸೆಸ್ ಜೋನ್ಸ್ ಹೇಳುತ್ತಾಳೆ.

ಈ ಬಾಂಬ್ ಸ್ಫೋಟದ ಬಗ್ಗೆ ರಿಚರ್ಡ್ ಸಾಸೀನಾ 'ಬರ್ಮಿಂಗ್ ಹ್ಯಾಂ' ಸಂಡೇ' ಬಗ್ಗೆಗೆ ಹಲವು ಗೀತೆಗಳನ್ನು ಬರೆದರು. ಈ ಕೆಳಗಿನ ಪದ್ಯ ಕೂಡಾ ಅವರದೇ.

ಬನ್ನಿ ನನ್ನ ಬಳಿ
ಹಾಡುತ್ತೇನೆ ನಾ ನಿಮಗೊಂದು ಹಾಡು
ಮೃದುವಾಗಿ ನಾ ಹಾಡುತ್ತೇನೆ
ಯಾರಿಗೂ ಇದು ನೋವುಂಟು ಮಾಡುವುದಿಲ್ಲ
ಬರ್ಮಿಂಗ್ ಹ್ಯಾಂ ನ ಭಾನುವಾರ
ಹರಿದಿತ್ತ ರಕ್ತದ ಕೋಡಿ ಮದ್ಯದ ಹಾಗೆ
ಗಾಯನದ ಗುಂಪು ಹಾಡುತ್ತಲೇ ಇತ್ತು
ಸ್ವಾತಂತ್ರ್ಯದ ಬಗ್ಗೆ

# ಜಾಹಿರಾತುಗಳಲ್ಲಿ ಮಹಿಳಾ ಪ್ರತಿನಿಧೀಕರಣ

ಈ ಮೇಲಿನ ವಿಷಯದ ಅಧ್ಯಯನಕ್ಕಾಗಿ 11 ನಿಯತ ಕಾಲಿಕೆಗಳನ್ನು ಗಮನಿಸಿದ್ದೇನೆ. ಆದರೆ ಈ ಲೇಖನ ಬರೆಯಲು ನಾಲ್ಕು ನಿಯತಕಾಲಿಕೆಗಳಾದ ತರಂಗ, ಸುಧಾ, ಗೃಹಶೋಭಾ, Women's era ಗಳಲ್ಲಿರುವ 21 ಜಾಹಿರಾತುಗಳನ್ನು ಮಾತ್ರ ವಿಶ್ಲೇಷಣೆಗೆ ಒಳಪಡಿಸುವ ಪ್ರಯತ್ನ ಮಾಡಿದ್ದೇನೆ. ಈ ನಾಲ್ಕು ನಿಯತಕಾಲಿಕೆಗಳಲ್ಲಿರುವ ಒಟ್ಟು ಜಾಹಿರಾತುಗಳು 52. ಇವುಗಳಲ್ಲಿ ಮಹಿಳೆಯನ್ನು ಉದ್ದೇಶಿಷಿ 27 ಜಾಹಿರಾತುಗಳಿವೆ. ಪುರುಷರನ್ನುದ್ದೇಶಿಸಿ 2 ಜಾಹಿರಾತುಗಳಿವೆ. ಸ್ತ್ರೀ-ಪುರುಷರಿಬ್ಬರನ್ನೂ ಉದ್ದೇಶಿಸಿ 5 ಜಾಹಿರಾತುಗಳಿವೆ. ಉಳಿದಂತೆ 14 ಜಾಹಿರಾತುಗಳು ಲಿಂಗನಿರಪೇಕ್ಷ ಜಾಹಿರಾತುಗಳಾಗಿವೆ. ಅಂದರೆ ಎಲ್ಲರಿಗೂ ಸಂಬಂಧಿಸಿದವಾಗಿವೆ.

ಮೇಲೆ ಹೇಳಿದಂತೆ ಒಟ್ಟಾರೆ ಈ ಎಲ್ಲಾ ಜಾಹಿರಾತುಗಳನ್ನು ಗಮನಿಸಿ ನನ್ನ ಅಧ್ಯಯನವನ್ನು ಸೀಮಿತಗೊಳಿಸಿಕೊಂಡು ಜಾಹಿರಾತುಗಳಲ್ಲಿ ಮಹಿಳೆಯನ್ನು 'ಗೃಹಿಣಿ'ಯಾಗಿ, ಪತ್ನಿಯಾಗಿ ಹೇಗೆ ಪ್ರತಿನಿಧೀಕರಣ ಮಾಡಲಾಗಿದೆ ಎಂಬುದನ್ನು ಈಗಾಗಲೇ ಹೇಳಿದಂತೆ 5 ಜಾಹಿರಾತುಗಳ ಮೂಲಕ ವಿಶ್ಲೇಷಣೆ ಮಾಡುವ ಪ್ರಯತ್ನವನ್ನು ಈ ಲೇಖನದಲ್ಲಿ ಮಾಡಿದ್ದೇನೆ. ಇದಕ್ಕಿಂತ ಪೂರ್ವದಲ್ಲಿ ಈಗಾಗಲೇ ಈ ಜಾಹಿರಾತುಗಳ ಬಗ್ಗೆ ಕೆಲವು ಅಧ್ಯಯನಗಳು, ಲೇಖನಗಳು ಇದ್ದು, ಅದರಲ್ಲಿ ಕಂಡು ಬಂದ ಕೆಲವು ಮಾಹಿತಿಗಳನ್ನು ಮತ್ತು ಪತ್ರಿಕೆಯಲ್ಲಿ ಬಂದ ಲೇಖನದ ಕೆಲವು ಅಂಶಗಳನ್ನು ಚರ್ಚಿಸಲು ಪ್ರಯತ್ನಿಸಿದ್ದೇನೆ.

ಮೊದಲಿಗೆ 'ಗೃಹಿಣಿ' ಎಂಬ ಪರಿಕಲ್ಪನೆಯನ್ನು ನೋಡುವುದಾದರೆ ಮದುವೆಯಾಗಿರುವ ಮತ್ತು ಕುಟುಂಬದ ಜವಬ್ದಾರಿ ಹೊತ್ತು ಕೆಲಸಕಾರ್ಯಗಳನ್ನು ನಿರ್ವಹಿಸುವವಳು ಎಂಬ ಅರ್ಥದಲ್ಲಿ ಬಳಸಿದ್ದೇನೆ. ಈ ರೀತಿಯ ಗೃಹಿಣಿ ಜಾಹಿರಾತುಗಳಲ್ಲಿ ಹೇಗೆ ಪ್ರತಿನಿಧೀಕರಣಗೊಂಡಿದ್ದಾಳೆ ಎಂಬುದನ್ನು ನೋಡೋಣ.

1. ಗೃಹಶೋಭಾ, ಜನವರಿ - 2004. ಪು - 116

Exo-ಆ್ಯಂಟಿ-ಬ್ಯಾಕ್ಟೀರಿಯಲ್ ಡಿಶ್‌ವಾಶ್‌ಬಾರ್ ಈ ಜಾಹಿರಾತು ಮಹಿಳೆಯನ್ನು ಉದ್ದೇಶಿಸಿದೆ.

'ಮೊತ್ತಮೊದಲು ಬಾರಿಗೆ ಡಿಶ್‌ವಾಶ್‌ಬಾರ್ ನಿಜವಾಗಿಯೂ ಸಂರಕ್ಷಿಸುವುದು ನಿಮ್ಮ ಕುಟುಂಬದ ಆರೋಗ್ಯವನ್ನು' ಎನ್ನುವಲ್ಲಿ

ಕುಟುಂಬದ ಆರೋಗ್ಯವನ್ನು ಕಾಪಾಡುವ ಹೊಣೆ ಮಹಿಳೆಯದು ಎಂದು ಭಾವಿಸಲಾಗಿದೆ. 'ಅಧಿಕ ಹೊಳಪು ಅಧಿಕ ನೈರ್ಮಲ್ಯ' ಎಂದು ಹೇಳುತ್ತಾ ಸೋಪಿನ ಗುಣ ಮಟ್ಟವನ್ನು ಹೇಳುತ್ತಾ ಡಿಶ್‌ವಾಶ್ ಬಾರ್‌ನ ಪ್ರಯೋಜನಗಳನ್ನು ಹೇಳುವಲ್ಲಿ ಎಕ್ಸೋ ಸೂಕ್ಷ್ಮಾಣುಗಳನ್ನು ನಾಶಪಡಿಸುವುದರ ಮೂಲಕ ನಿಮ್ಮ ಕುಟುಂಬದ ಆರೋಗ್ಯವನ್ನು ಕಾಪಾಡುತ್ತದೆ ಎಂದು ಹೇಳುತ್ತಾ 'ನಿಮ್ಮ ಕೈಗಳ ತ್ವಚೆಯನ್ನು ಸಂರಕ್ಷಿಸುವುದಲ್ಲದೆ ಅದು ಸುರಕ್ಷಿತವಾಗಿಯೂ, ಕೋಮಲವಾಗಿಯೂ ಇರುವಂತೆ ನೋಡಿಕೊಳ್ಳುತ್ತದೆ' ಎನ್ನುವಲ್ಲಿ ಮಹಿಳೆ ಮೃದುವಾಗಿ ಕೋಮಲವಾಗಿ ಇರಲು ಬಯಸುತ್ತಾಳೆ ಎಂದು ಭಾವಿಸಲಾಗಿದೆ. ಪಾತ್ರೆ ತೊಳೆಯುವುದರಿಂದ ಹಿಡಿದು ಮನೆಯಲ್ಲಿ ಯಾರಿಗಾದರೂ ಆರೋಗ್ಯ ಕೆಟ್ಟರೆ ಅದನ್ನೆಲ್ಲ ನೋಡಿಕೊಳ್ಳುವ ಜವಬ್ದಾರಿ ಮಹಿಳೆಯದೇ ಎಂದು ಭಾವಿಸಲಾಗುತ್ತದೆ.

'ಎಲ್ಲಾ ಸಮಸ್ಯೆಗಳಿಗೆ ಪರಿಹಾರ ಒದಗಿಸಲೆಂದೇ ಆ್ಯಂಟಿ ಬ್ಯಾಕ್ಟಿರಿಯಲ್ ಡಿಶ್‌ವಾಶ್‌ಬಾರ್ ಉತ್ಪಾದಿಸಿದೆ' ಎಂದು ಹೇಳುವಲ್ಲಿ ಪಾತ್ರೆ ತೊಳೆಯುವ ಕೆಲಸ ಮಹಿಳೆಯ ಸಮಸ್ಯೆಗಳಲ್ಲಿ ಸೇರುತ್ತದೆ. ಮಹಿಳೆಯ ಸಮಸ್ಯೆಗಳಿಗೆಲ್ಲಾ ಪರಿಹಾರ ಒದಗಿಸುಸತ್ತದೆ ಎನ್ನುವಲ್ಲಿ ಮಹಿಳೆಗೆ ಪಾತ್ರೆ ತೊಳೆಯುವ ಸಮಸ್ಯೆ ಪರಿಹಾರವಾದರೆ ಅವಳ ಸಮಸ್ಯೆಗಳೇ ಪರಿಹಾರ ಆದಂತೆ ಎಂದು ಭಾವಿಸಲಾಗಿದೆ.

ಈ ಜಾಹಿರಾತಿನಲ್ಲಿರುವ ಮಹಿಳೆ ಕುಟುಂಬದ ಜವಬ್ದಾರಿ ಹೊತ್ತ ಮಹಿಳೆಯಾಗಿದ್ದಾಳೆ. ಮಧ್ಯಮ ಮತ್ತ ಮೇಲ್‌ಮಧ್ಯಮ ವರ್ಗದ ಮಹಿಳೆಗೆ ಈ ಜಾಹಿರಾತನ್ನು ಉದ್ದೇಶಿಸಿದಂತಿದೆ ಮತ್ತು ನಿಮ್ಮ ಕುಟುಂಬದ ಆರೋಗ್ಯವನ್ನು ಸಂರಕ್ಷಿಸುತ್ತದೆ ಎಂದು ಹೇಳುವಲ್ಲಿ ಗೃಹಿಣಿಯ ಕಾರ್ಯನಿರ್ವಹಣೆಗಳನ್ನು ಮರು ಉತ್ಪಾದಿಸುತ್ತದೆ ಎಂದು ಹೇಳಬಹುದು.

ನಿ. ಗೃಹಶೋಭಾ ಜನವರಿ - 2004 - ಪು - 9

Iodex Rub ಈ ಜಾಹಿರಾತು ಲಿಂಗನಿರಪೇಕ್ಷವಾದುದಾಗಿದೆ. ಅಂದರೆ ಎಲ್ಲರನ್ನು ಉದ್ದೇಶಿಸಿದೆ.

'ಹಳೆಯ ಗೆಳೆಯರು ಕಾಲದೊಂದಿಗೆ ಇನ್ನೂ ಒಳ್ಳೆಯವರಾಗುತ್ತಾರೆ' ಎಂದು ಹೇಳುತ್ತಾ ಹಳೆಯ ಗೆಳೆಯರು ಎನ್ನುವಲ್ಲಿ ಅವಳನ್ನು ದಿಗ್ಭ್ರಮೆಗೊಳಿಸಿ ನಂತರ ಕಾಲದೊಂದಿಗೆ ಇನ್ನು ಒಳ್ಳೆಯವರಾಗುತ್ತಾರೆ ಎಂದು ಹೇಳಲಾಗಿದೆ. ಅಂದರೆ Iodex ಮಹಿಳೆಯೊಂದಿಗೆ ಪರಂಪರೆಯಿಂದಲೂ ಅವಳ ಜೊತೆ ಇರುವಂತೆ ಮೊದಲಿಗಿಂತ ಉತ್ತಮ ಗುಣಉಳ್ಳದಾಗಿದೆ. ಅವಳೊಂದಿಗೆ ಯಾವಾಗಲೂ ಇರಬೇಕು ಎಂದು ಭಾವಿಸಲಾಗುತ್ತದೆ.

'ಅಪೂರ್ವವಾದ ತಕ್ಷಣ ಕ್ರಿಯೆಗೆ ಪೂರಕವಾದ ಸೂತ್ರೀಕರಣ' ಎನ್ನುವಲ್ಲಿ ಮಹಿಳೆಯೊಂದಿಗೆ ಯಾವಾಗಲೂ ಇರಬೇಕಾದಂಥದ್ದು Iodex Rub ನೋವಿನೊಡನೆ ಹೋರಾಡಬಲ್ಲ ಶಕ್ತಿ ಅಧಿಕವಾಗಿದೆ ಎಂದು ಹೇಳುತ್ತಾ Iodex Rub ನ್ನು ಪುರುಷರು ಉಪಯೋಗಿಸಿದರೂ ಕೂಡ ಹೆಚ್ಚಾಗಿ ಉಪಯೋಗವಾಗುವುದು ಮಹಿಳೆಗೆ ಎಂದು ಭಾವಿಸಲಾಗುತ್ತದೆ. ಕುಟುಂಬದಲ್ಲಿ ಎಲ್ಲರ ಆರೋಗ್ಯ ಮತ್ತು ಕ್ಷೇಮಾಭಿವೃದ್ಧಿಯನ್ನು ಕಾಪಾಡುವ ಜವಬ್ದಾರಿ ಇವಳ ಮೇಲಿರುವುದರಿಂದ ಸದಾ ಅವಳಲ್ಲಿ ಇರಬೇಕಾದುದು ಎಂದು ಭಾವಿಸಲಾಗಿದೆ ಮತ್ತು 'ನಿಮ್ಮ ವಿಶ್ವಾಸನೀಯಾ ಅಯೋಡೆಕ್ಸ್' ಎನ್ನುವಲ್ಲಿ ಮಹಿಳೆ ಮತ್ತು Iodex ಇಬ್ಬರೂ ವಿಶ್ವಾಸದಿಂದಿರಬೇಕಾದವರು ಎಂದು ಹೇಳುತ್ತಾ ಈ ಜಾಹಿರಾತಿನಲ್ಲಿ ಮಹಿಳೆ ಮದ್ಯಮವರ್ಗದ ಮಹಿಳೆಯಾಗಿ ಪ್ರತಿನಿಧೀಕರಣಗೊಂಡಿದ್ದಾಳೆ ಎಂದು ಹೇಳಬಹುದು.

2. ಡಿಸೆಂಬರ - 11 - 2003 ಸುಧಾ - ಪು - 2

ಇದು ಅಮುಲ್ ಉತ್ಪನ್ನಗಳ ಸ್ಪರ್ಧೆಯ ಜಾಹಿರಾತಾಗಿದೆ ಮತ್ತು ಮಹಿಳೆಯನ್ನು ಉದ್ದೇಶಿಸಿದೆ.

ಹೆಚ್ಚು ಅಮುಲ್ ಉತ್ಪನ್ನಗಳನ್ನು ಬಳಸಿ ಪಾಕವಿಧಾನವನ್ನು ತಯಾರಿಸಿದರೆ ಚಿನ್ನವನ್ನು ಬಹುಮಾನವಾಗಿ ಪಡೆಯಬಹುದು ಎಂದು ಹೇಳುತ್ತಾ ' Gharki Rani Se Maharani Contest' ಅಂದರೆ ಮಹಿಳೆಯನ್ನು ಮನೆಯರಾಣಿ ಎಂದು ಈಗಾಗಲೇ ಗುರುತಿಸಿ ಅವಳು ಮಹಾರಾಣಿ ಆಗುವ ಅವಕಾಶವಿದೆ ಅಮುಲ್ ಉತ್ಪನ್ನಗಳನ್ನು ಬಳಸುವುದರಿಂದ ಎಂದು ಹೇಳಲಾಗಿದೆ.

'ನೀವು ಟಿವಿಯಲ್ಲಿ ಕಾಣಿಸಿಕೊಳ್ಳಲು ನಿಮಗೊಂದು ಸುವರ್ಣವಕಾಶ' ಎಂದು ಹೇಳುವಲ್ಲಿ ಹೆಣ್ಣಿಗೆ ಟಿವಿಯಲ್ಲಿ ಕಾಣಿಸಿಕೊಳ್ಳುವ ಆಸೆ ಇರುತ್ತದೆ ಎಂದು ಭಾವಿಸಲಾಗಿದೆ. ಎಲ್ಲಕ್ಕಿಂತ ಹೆಚ್ಚು ಅಮುಲ್ ಉತ್ಪನ್ನಗಳನ್ನು ಬಳಸಿ ಪಾಕವಿಧಾನವನ್ನು ತಯಾರಿಸಿ ಖ್ಯಾತನಾಮರಾಗಿಬಿಡಿ ಎಂದು ಹೇಳುವಲ್ಲಿ ಮಹಿಳೆಗೆ ಪ್ರಸಿದ್ಧಿ ಪಡೆಯುವ ಅಥವಾ ಪ್ರಚಾರ ಹೊಂದುವ ಆಸೆ ಇರುತ್ತದೆ ಎಂದು ಭಾವಿಸಲಾಗಿದೆ. 'ಪ್ರಮುಖ ಟಿವಿ ಚ್ಯಾನಲ್ ಒಂದರಿಂದ ಜಯಶಾಲಿಗಳಿಗೆ ಕಿರೀಟ ತೊಡಿಸಲಾಗುತ್ತದೆ'. 3 ಲಕ್ಷ ಬೆಲೆಯ ಚಿನ್ನವನ್ನು ಕೊಡಲಾಗುವುದು ಮೊದಲ ಬಹುಮಾನ 1 ಲಕ್ಷ ಬೆಲೆಯ ಚಿನ್ನ, 2ನೇ ಬಹುಮಾನ 50,000 ಬೆಲೆಯ ಚಿನ್ನ 3ನೇ ಬಹುಮಾನ 35,000 ಬೆಲೆಯ ಚಿನ್ನ ಎಂದು ಹೇಳುವಲ್ಲಿ ಮಹಿಳೆಗೆ ಚಿನ್ನದ ಮೇಲೆ ಆಸೆ ಇರುತ್ತದೆ ಎಂದು ಭಾವಿಸಲಾಗಿದೆ.

ಒಟ್ಟಾರೆ ಈ ಜಾಹಿರಾತು ಹೆಚ್ಚಾಗಿ ಮಧ್ಯಮವರ್ಗದ ಮಹಿಳೆಯನ್ನೇ ಉದ್ದೇಶಿಸಿದೆ ಎಂದು ಹೇಳಬಹುದು. ತಾನು ಪ್ರಸಿದ್ಧಿ ಹೊಂದಲು ಮತ್ತು ಟಿವಿಯಲ್ಲಿ ಕಾಣಿಸಿಕೊಳ್ಳುವ ಅವಕಾಶಸಿಗುವುದು ಅಮುಲ್ ಉತ್ಪನ್ನಗಳನ್ನು ಬಳಸುವುದರಿಂದ ಮಾತ್ರವೇ ಎಂದು ಭಾವಿಸುತ್ತಾ ಅವಳು ಮತ್ತೆ ಅಡುಗೆ ಮನೆಗೆ ಸೀಮಿತವಾಗುವ ಚಿತ್ರಣವನ್ನು ಈ ಜಾಹಿರಾತು ಪ್ರತಿನಿಧಿಸುತ್ತದೆ.

ಮೂರು ಜಾಹಿರಾತುಗಳೂ ಸಹ ಈಗಾಗಲೇ 'ಗೃಹಿಣಿ' ಎಂದು ಅರ್ಥೈಸಿದಂತೆ ಮನೆಯ ಕೆಲಸಕಾರ್ಯಗಳು ಕುಟುಂಬದ ಆರೋಗ್ಯವನ್ನು ಕಾಪಾಡುವ ಜವಾಬ್ದಾರಿ ಮಹಿಳೆಯದೇ ಎನ್ನುವುದನ್ನು ಪುನರ್ ಉತ್ಪಾದಿಸುತ್ತವೆ ಎಂದು ಹೇಳಬಹುದು.

ಇನ್ನು ಪತ್ನಿಯಾಗಿ ಹೇಗೆ ಪ್ರತಿನಿಧೀಕರಣಗೊಂಡಿದ್ದಾಳೆ ಎನ್ನುವುದನ್ನು ನೋಡುವುದಾದರೆ.

1. Womens era - January - 2004 - ಪು - 76

Honeymoon Inn ಇದು ಮೇಲ್ವರ್ಗದ ಮಹಿಳೆಯನ್ನು ಉದ್ದೇಶಿಸಿದ ಜಾಹಿರಾತಾಗಿದೆ.

ನಿಮ್ಮ ಗಂಡನಜೀವನದಲ್ಲಿ ಹೊಸ ಮಹಿಳೆ ಬೇಕೆ? ಎಂದು ಹೇಳು ಅವಳನ್ನು ದಿಗ್ಭ್ರಾಂತಳನ್ನಾಗಿ ಮಾಡಿ ನಂತರ ಆ ಹೊಸ ಮಹಿಳೆ ನೀವೇ ಆಗಿ ಎಂದು ಹೇಳಲಾಗಿದೆ. ಹೇಗೆಂದರೆ Honeymoon Inn ಗೆ ಹೋದರೆ ರೋಮಾಂಚನಕಾರಿಯಾದ Honeymoon ಮಾಡುಬಹುದು ಎಂದು ಹೇಳಲಾಗಿದೆ.

ಗಂಡನ ಆಸೆ ಆಕಾಂಕ್ಷೆಗಳನ್ನು ಅವಶ್ಯಕತೆಗಳನ್ನು ಹೆಂಡತಿಯಾದವಳು ಪೂರೈಸಬೇಕೆಂದು ಈ ಜಾಹಿರಾತಿನಲ್ಲಿ ಭಾವಿಸಲಾಗಿದೆ.

ನಿ. ಡಿಸೆಂಬರ್ - 18 - 2003 ತರಂಗ ಪು - 2

OG - 3 VEG tablets ನ ಜಾಹಿರಾತು ಪುರುಷರನ್ನುದ್ದೇಶಿಸಿ ಹೇಳಲಾಗಿದೆ.

OG - 3 VEG ತೆಗೆದುಕೊಳ್ಳುವುದರಿಂದ 'ಒಳ್ಳೆಯ ಆರೋಗ್ಯ ಲಭಿಸುತ್ತದೆ' ಅದಕ್ಕಾಗಿ ಒಳ್ಳೆಯ ಆರೋಗ್ಯದಿಂದ ಜೀವನವನ್ನು ನಾನು ಹೇಗೆ ಪೂರ್ಣವಾಗಿ ಆಸ್ವಾದಿಸಲಿ ? ಎಂದು ಕೇಳುತ್ತಾ ಅದಕ್ಕೆ ಉತ್ತರವಾಗಿ ಚಂದವಾದ ಹೆಂಡತಿ ಹುಶಾರಾದ ಮಕ್ಕಳು. ಉತ್ತಮವಾದ ಉದ್ಯೋಗ ಇವೆಲ್ಲವೂ ಇದ್ದರೆ ಜೀವನ ಪೂರ್ಣ ಆಸ್ವಾದಿಸಿದಂತೆ ಎಂದು ಭಾವಿಸಲಾಗಿದೆ.

ಗಂಡಿನ ಸುಖಸಂತೋಷಕ್ಕೆ ಚಂದವಾದ ಹೆಂಡತಿಯ ಅವಶ್ಯಕತೆ ಇದೆ ಎಂದು ಭಾವಿಸಿ ಮೊದಲಿನಿಂದಲೂ ಹೆಂಡತಿಯಾದವಳು ಗಂಡನ ಆಶ್ರಯದಲ್ಲಿಯೇ ಇರಬೇಕಾದವಳು ಎಂಬುದನ್ನು ಈ ಜಾಹಿರಾತು ಮರು ಉತ್ಪಾದಿಸುತ್ತದೆ. ಈ ಜಾಹಿರಾತು ಮೇಲೆ ಮಧ್ಯಮ ಮತ್ತು ಮಧ್ಯಮವರ್ಗದ ಗಂಡಸರನ್ನು ಉದ್ದೇಶಿಸಿದ ಜಾಹಿರಾತಾಗಿದೆ ಎಂದು ಹೇಳಬಹುದು.

ಈ ಎರಡೂ ಜಾಹಿರಾತುಗಳಲ್ಲಿಯೂ ಮಹಿಳೆಯನ್ನು ಗಂಡನ ಅಗತ್ಯಕ್ಕೆ ತಕ್ಕಂತೆ ಅವಳು ಹೇಗೆ ಒದಗಿ ಬರುತ್ತಾಳೆ ಎಂಬುದನ್ನು ತಿಳಿಸುತ್ತವೆ.

ಈ ಎಲ್ಲಾ ಜಾಹಿರಾತುಗಳನ್ನು ನೋಡಿದರೆ ಹೆಚ್ಚಾಗಿ ಮಹಿಳೆಯನ್ನು ಉದ್ದೇಶಿಸಿದ ಜಾಹಿರಾತುಗಳು ಕಂಡುಬರುತ್ತವೆ. ಪುರುಷನನ್ನು ಉದ್ದೇಶಿಸಿದ್ದರೂ ಸಹ ಅದರಲ್ಲಿ ಮಹಿಳೆಯನ್ನು ಪ್ರತಿನಿಧಿಸುತ್ತಾರೆ. ಉದಾ:- shaving blade, shaving cream ಮುಂತಾದವು ಜಾಹಿರಾತುಗಳಲ್ಲಿ ಹೆಚ್ಚಾಗಿ ಕುಟುಂಬಕ್ಕೆ ಸಂಬಂಧಿಸಿದ್ದವುಗಳಲ್ಲಿ ಮಹಿಳೆಯನ್ನು ಪ್ರತಿನಿಧಿಸಿದ್ದಾರೆ ಅದರಲ್ಲೂ ಗೃಹಪಯೋಗಿ ಸಾಧನೆಗಳ ಜಾಹಿರಾತುಗಳಲ್ಲಿ ಹೆಚ್ಚಾಗಿ ಪ್ರತಿನಿಧಿಸುತ್ತಾರೆ ಹೊರತು ಯಾವುದೇ ವಾಹನಗಳಲ್ಲಿ ಅವಳನ್ನು ಪ್ರತಿನಿಧಿಸುವುದಿಲ್ಲ. ಪ್ರತಿನಿಧಿಸಿದರೂ ದ್ವಿಚಕ್ರವಾಹನಗಳಲ್ಲಿ ಇಲ್ಲಿ ಅದು ಕಡಿಮೆ ಪ್ರಮಾಣದಲ್ಲಿ ಪ್ರತಿನಿಧಿಸುತ್ತಾರೆ ಉದಾ : ಸೈಕಲ್, ಸ್ಕೂಟಿಗಳಲ್ಲಿ ಮಾತ್ರ ಪ್ರತಿನಿಧಿಸುತ್ತಾರೆ ಈಗಾಗಲೇ ಇರುವ ರೂಢಿಗತ ನಂಬಿಕೆಯಾದ 'ಮಹಿಳೆ ದೈಹಿಕವಾಗಿ ದುರ್ಬಲಳು' ಎಂಬುದನ್ನೇ ಈ ಜಾಹಿರಾತುಗಳು ಪ್ರತಿಪಾದಿಸುತ್ತಿದ್ದು ಯಾವುದೇ ಗೇರ್‌ಗಾಡಿಗಳಲ್ಲಿ (Honda,Pulser) ಅವಳನ್ನು ಪ್ರತಿನಿಧಿಸುವುದಿಲ್ಲ ಅವಳಿಗೆ ಅವುಗಳನ್ನು ಓಡಿಸುವ ಸಾಮರ್ಥ್ಯ ಇದ್ದರೂ ಸಹ ಅದನ್ನು ಹಿಂದೆ ಸರಿಸಿ ಕೇವಲ ಗಂಡಿನ ಹಿಂದೆ ಕೂತು ವಿಹರಿಸುವುದನ್ನು ಮಾತ್ರ ಪ್ರತಿನಿಧಿಸುತ್ತವೆ ಅದರಲ್ಲೂ Pulser ಎಂಬ ಗಾಡಿ Definitely male ಎಂಬ ಸಿಂಬಲನ್ನು ಹೊತ್ತುಕೊಂಡೆ ಹೊರಬಂದಿದೆ.

ಜಾಹಿರಾತುಗಳಲ್ಲಿ ಈ ರೀತಿ ಮಹಿಳೆಯನ್ನು ಪ್ರತಿನಿಧಿಸಲು ಕೇವಲ ಸರಕು ಸಂಸ್ಕೃತಿಯೊಂದೇ ಅಲ್ಲ ಇದರ ಜೊತೆಯಲ್ಲಿ ಪಿತೃ ಸಂಸ್ಕೃತಿಯು ಸೇರಿಕೊಂಡಿದೆ ಮಹಿಳೆ ಪಿತೃಪ್ರಧಾನತೆಯ ಹೊಸಿಲ ಒಳಗೆ ಇರುತ್ತಾಳೆ ಪಿತೃ ಪ್ರಧಾನ ಸಂಸ್ಕೃತಿ 'ಗೃಹಿಣಿ'ಎಂಬ ಪರಿಕಲ್ಪನೆಯಲ್ಲಿಯೇ ಮಹಿಳೆಯನ್ನು ಪಳಗುವಿಸಿಕೆಯಲ್ಲಿ ಆಸಕ್ತವಾಗಿರುತ್ತದೆ.

ಈ ಜಾಹಿರಾತುಗಳಲ್ಲಿ ಕೇವಲ ಲಿಂಗ ತಾರತಮ್ಯವನ್ನಲ್ಲದೇ ಬಹುನೆಲೆಗಳಿಂದಲೂ ನೋಡಬಹುದು. ವರ್ಗದ ಹಿನ್ನಲೆಯಲ್ಲಿ ನೋಡುವುದಾದರೆ ಸರಕು ಸಂಸ್ಕೃತಿಯ ಗಮನ ಮೇಲ್

ಮಧ್ಯಮವರ್ಗದ ಕಡೆ ಇರುತ್ತದೆ. ಮೊದಲಿನಿಂದಲೂ ಶ್ರೇಣೀಕರಣಗೊಂಡ ಸಮಾಜದಂತೆ ಈ ಜಾಹಿರಾತುಗಳಲ್ಲಿಯೂ ಕೂಡ ಶ್ರೇಣೀಕರಣ ಕಂಡು ಬರುತ್ತದೆ ಈ ಎಲ್ಲಾ ಜಾಹಿರಾತುಗಳಲ್ಲಿ ಕೇವಲ ಮೇಲ್ವರ್ಗದ ಮತ್ತು ಮೇಲ್‌ಮಧ್ಯಮವರ್ಗದವರನ್ನು ಉದ್ದೇಶಿಸಿದ ಜಾಹಿರಾತುಗಳು ಕಂಡುಬರುತ್ತದೆ ಹೊರತು ಯಾವುದೇ ಕೆಳವರ್ಗದವರನ್ನು ಪ್ರತಿನಿಧಿಸುವ, ಉದ್ದೇಶಿಸಿದ ಜಾಹಿರಾತುಗಳು ಕಂಡುಬರುವುದಿಲ್ಲ. ಇದರ ಮೂಲಕ ತಿಳಿಯುವುದೆಂದರೆ ಯಾವುದೇ ಪುಸ್ತಕ ಅಥವಾ ಮಾಧ್ಯಮವನ್ನು ನೋಡುವ, ಓದುವ ಶಕ್ತಿ ಬಹುಶಃ ಕೆಳವರ್ಗದವರಿಗೆ ಇರುವುದಿಲ್ಲವೆಂದೂ ಅದರಿಂದ ಜಾಹಿರಾತುಗಳು ಪ್ರಯೋಜನವಾಗುವುದಿಲ್ಲವೆಂದೂ ಈ ರೀತಿಯ ಜಾಹಿರಾತುಗಳನ್ನು ಯೋಜಿಸಿರಬಹುದು ಇನ್ನೊಂದು ಗಮನಿಸಬೇಕಾದ ಸಂಗತಿಯೆಂದರೆ ಇಂಗ್ಲೀಷ್ ನಿಯತಕಾಲಿಕೆಗಳಲ್ಲಿ ಹೆಚ್ಚಾಗಿ ಮೇಲ್ವರ್ಗದವರನ್ನುದ್ದೇಶಿಸಿದ ಜಾಹಿರಾತುಗಳು ಕಂಡುಬರುತ್ತವೆ ಕಾರಣ ಮೇಲ್ವರ್ಗದವರು ಹೆಚ್ಚಾಗಿ English ಪತ್ರಿಕೆ, ನಿಯತಕಾಲಿಕೆಗಳನ್ನು ಕೊಳ್ಳುವುದರಿಂದ ಈ ರೀತಿಯಾಗುತ್ತದೆ. ಹೀಗೆ ಜಾಹಿರಾತುಗಳನ್ನು ಬಹುನೆಲೆಗಳಲ್ಲಿ ವಿಶ್ಲೇಷಿಸಬಹುದಾಗಿದೆ ಆದರೆ ಈ ಲೇಖನದಲ್ಲಿ ಹೆಚ್ಚಾಗಿ ಮಹಿಳೆಯ ಪ್ರತಿನಿಧೀಕರಣವನ್ನು ನೋಡುವ ಪ್ರಯತ್ನ ಮಾಡಿದ್ದೇನೆ.

ಒಟ್ಟಾರೆ ಈ ಎಲ್ಲಾ ಜಾಹಿರಾತುಗಳು ಪುರುಷ ಪ್ರಧಾನ ವ್ಯವಸ್ಥೆಯ ರೂಢಿಗತ ಮೌಲ್ಯಗಳನ್ನೇ ಪುನರ್ ಉತ್ಪಾದಿಸುತ್ತಾ 'ಸಂಸ್ಕೃತಿ'ಯ ಹೆಸರಿನಲ್ಲಿ ಮಹಿಳೆಯನ್ನು ತಮ್ಮ ನಿಯಂತ್ರಣದಲ್ಲಿಟ್ಟುಕೊಳ್ಳುವ ಪ್ರಯತ್ನವನ್ನು ಮಾಡುತ್ತವೆ ಎಂದು ಹೇಳಬಹುದು.

ಕಲಾವತಿ.ಬಿ.ಜಿ.

# ಆಸ್ರಮದಾಗೆ ಊಟ ಸಿಕ್ತದಾ ?

ಲಕ್ಷ್ಮಿ ವಾಸವಾಗಿದ್ದುದು ಒಂದು ವಠಾರದಲ್ಲಿ. ವಠಾರ ಅನ್ನುವುದಕ್ಕಿಂತ ಛತ್ರವೊಂದರ ಒಂದು ಭಾಗದ ಪುಟ್ಟ 'ಮನೆ' ಎಂದು ಕರೆಸಿಕೊಳ್ಳುವ ಗೂಡಿನಲ್ಲಿ ವಾಸ ಎಂದರೆ ಸರಿಯಾದೀತೇನೊ. ಮನೆಯಲ್ಲಿ ತಾಯಿಯದೇ ಯಾಜಮಾನ್ಯ. ಅಪ್ಪ ಕೆಲಸಕ್ಕೆ ಬಾರದವನಂತಾದಾಗ ಅಮ್ಮನೇ ಯಜಮಾನಿಯಾಗುವುದು ಸಹಜ; ಅನಿವಾರ್ಯ. ಅದಾದರೂ ಎಂತಹ ಯಜಮಾನಿಕೆ. ಹೆಣ್ಣು ಮಕ್ಕಳನ್ನು ಹದ್ದಿನಂತೆ ಕಾಯುವುದು, ಗಂಡು ಹುಡುಗರನ್ನು ಪೋಲಿ ತಿರುಗದೆ ದುಡಿದು ತಿನ್ನಿರೋ ಎಂದು ಗದರುತ್ತ ಹೊರಗಟ್ಟುವುದು. ಇನ್ನುಳಿದ ಅವಳ ಸಮಯವೆಲ್ಲ ಅವರಿವರ ಮನೆಗೆಲಸ ಮಾಡುತ್ತ, ಛತ್ರದಲ್ಲಿ ಮದುವೆ ಮುಂಜಿ, ಪುಣ್ಯಕಾರ್ಯಗಳಾದರೆ ಒಂದಿಷ್ಟು ದುಡಿದು ಬಂದುದರಲ್ಲಿ ಕೂಳಿಗೆ ದಾರಿಮಾಡಿಕೊಳ್ಳುವುದಕ್ಕೇ ಸಾಕಾಗಿ ಹೋಗುತ್ತಿತ್ತು.

ಲಕ್ಷ್ಮಿ ತನ್ನ ಅಪ್ಪನ ಬಗ್ಗೆ ಬಹಳಷ್ಟು ಬಾರಿ ಯೋಚಿಸುವುದಿತ್ತು. ಅಪ್ಪ ಹಾಗೇಕೆ ? ಅಪ್ಪ ಪ್ರಾಯದಲ್ಲಿದ್ದಾಗ ಫ್ಯಾಕ್ಟರಿಗಳಿಗೆ ಸೈಕಲ್‌ನಲ್ಲಿ ಊಟದ ಕ್ಯಾರಿಯರ್ ಒಯ್ದು ಕೊಡುತ್ತಿದ್ದನಂತೆ. ಸಾಕಷ್ಟು ಸಂಪಾದನೆ ಇತ್ತು. ಫ್ಯಾಕ್ಟರಿ ಕೆಲಸ ಯಾಕೆ ಕೈ ಬಿಟ್ಟುಹೋಯಿತೋ ಅಂತೂ ಹೋಯಿತು. ಮತ್ತವನು ಸಿನಿಮಾ ಥೇಟರಲ್ಲಿ ಟಿಕೆಟ್ ನೋಡಿ ಒಳಗಡೆ ಬಿಡೋ ಘನಂದಾರಿ ಕೆಲಸಾನೂ ಮಾಡಿದನಂತೆ.

ಅಮ್ಮ ಹೇಳುವುದುಂಟು ಈ ಅಪ್ಪನ ಅಪ್ಪನಿಗೆ ಒಂದಿಷ್ಟು ಆಸ್ತಿಯೂ ಇತ್ತಂತೆ. ಅಪ್ಪ ಕುಡಿದು-ತಿಂದು ಹಾಳುಮಾಡಿದ್ದಿರ-ಬೇಕು. ಈಗಂತೂ ಎಂಥದೂ ಇಲ್ಲ. ಅಪ್ಪ ಬಿದ್ದ ಕಡೆ ಬಿದ್ದಿದ್ದಾನೆ. ಎಂಥದೋ ತುರಿಕೆಯ ಕಾಯಿಲೆ. ಅವನಿಗೂ ಅಮ್ಮ ಬೇಸಿ ಹಾಕೋ ಗಂಜಿ ಬಿಟ್ಟರೆ ಬೇರೆ ಇಲ್ಲ....

ಈ ಅಪ್ಪ ಸರಿ ಇದ್ದಾಗ ಅಮ್ಮನ ಜೀವ ತಿಂದೋ, ದರ್ಪ ತೋರಿಸ್ತಾನೊ ಆರು ಮಕ್ಕಳನ್ನು ಹುಟ್ಟಿಸಿದವ. ಲಕ್ಷ್ಮಿಯ ಜೊತೆಗೆ ಮೂವರು ಅಕ್ಕ ತಂಗಿಯರು. ಇಬ್ಬರು ಸಹೋದರರು. ಅಮ್ಮ ಹೈರಾಣ ಬಿದ್ದು ಇಬ್ಬರಿಗೆ ಮದುವೆ ಮಾಡಿದಳು. ಗಂಡು ಹುಡುಗರಿಗೆ ಮದುವೆ ಕಷ್ಟವೇ ಇಲ್ಲ. ತುದಿಗಾಲಲ್ಲಿ ನಿಂತು ಹೆಣ್ಣು ಕೊಡ್ತಾರಲ್ಲ. ಅಂತೂ ಇಬ್ಬರನ್ನು ಕಳಿಸಿದರೆ, ಇಬ್ಬರು ಮನೆ ತುಂಬಿದರು. ಸಂಸಾರದ ಸದಸ್ಯರ ಸಂಖ್ಯೆಯಲ್ಲಿ ವ್ಯತ್ಯಾಸವೇನೂ ಇಲ್ಲ.

ಲಕ್ಷ್ಮಿಗೂ ಮದುವೆ ಮಾಡಬೇಕೆಂದಳು ಅಮ್ಮ.

ಬಂದು ನೋಡಿದವರೂ ಉಂಟು. ಬಡವರೋ, ಗುಡಿಸಲೋ ಹೆಣ್ಣು ನೋಡಕ್ಕೆ ಬರೋರು ಅಲ್ಲೂ ಬರ್ತಾರೆ. ಇದ್ದುದರಲ್ಲೇ ಅವರವರ ಅಂತಸ್ತಿನ ಜಬ್ರ್ಬು ಖದರ್ರು ಇರುತ್ತೆ.

ಅಂಥ ನಾಲ್ಕಾರು ಗಂಡುಗಳು ಬಂದು ನೋಡಿ, ಮೀಸೆ ತಿರುವಿ ಹೋದವು. ಮದುವೆ ಆಗಲಿಲ್ಲ, ಅಷ್ಟೇ.

ಯಾಕೆ ಲಕ್ಷ್ಮಿ ಮದುವೆ ಆಗಲಿಲ್ಲ ಅಂದರೆ

"ಚೆನ್ನಾಗಿ, ರೂಪ್ಪಾಗಿರೋರಿಗೇ ಮದ್ವೆ ಆಗೋದು ಕಷ್ಟ, ಇನ್ನು ನನಗಾಗುತ್ತಾ" ಅನ್ನುತ್ತಾಳೆ ಲಕ್ಷ್ಮಿ.

ಲಕ್ಷ್ಮಿ ಚೆಲುವೆ ಹೌದೋ ಅಲ್ಲವೋ ಹೇಗೆ ಹೇಳುವುದು ? ಅವಳ ದೃಷ್ಟಿಯಲ್ಲಿ ಚೆಲುವು ಅಂದರೆ ಯಾವುದೋ! ಈಗ ಲಕ್ಷ್ಮಿಯನ್ನು ಚೆಲುವೆಯೋ ಕುರೂಪಿಯೋ ಅಂತ ನಿರ್ಧರಿಸಿಬಿಡೋದು ಕಷ್ಟ. ಸಣ್ಣಗಿದ್ದಾಳೆ, ವಯಸ್ಸಾಗಿದೆ. ಮುಖದಲ್ಲಿ ಮಡವೆ ಚಿವುಟಿ ಹಾಕಿದ ಮೇಲೆ ಉಳಿಯುವ ಕಲೆಗಳು ಹಾಗೆಯೇ ಇವೆ. ಅವು ಮಾಡಿರುವ ಹಳ್ಳಗಳು ಅಮ್ಮ ಎದ್ದ ಮುಖದ ಕಲೆಯ ಹಾಗೆ ಉಳಿದುಬಿಟ್ಟಿವೆ.

ಲಕ್ಷ್ಮಿಯ ತಲೆಗೂದಲು ಎಣ್ಣೆ ಕಂಡಂತಿಲ್ಲ. ತಲೆಗೆ ಹಣಿಗೆ ಹಾಕುವುದೂ ಅಪರೂಪ.

ತುಸು ಗಂಟಿದ್ದ, ಕೆಂಪು-ಬಿಳಿ ಮಿಶ್ರಿತ ಕೂದಲು, ಅವು ರಾಶಿಯೇನಲ್ಲ...ಇವೆ. ಒಂದು ಕಾಲಕ್ಕೆ ರಾಶಿಗೆ ಸೇರಬಹುದಾಗಿದ್ದ ಕೂದಲುಗಳು... ಹೇಗೆ ಹೇಗೋ ಹೆಣೆದುಕೊಂಡಿವೆ. ಅವರಿವರು ಕೊಟ್ಟ ಅಲ್ಲಲ್ಲಿ ತೇಪೆ ಹಾಕಿಕೊಂಡ ಸಿಂಥೆಟಿಕ್ ಸೀರೆಗಳು, ಬಣ್ಣ ಕಳೆದುಕೊಂಡ ಬಣ್ಣ ಬಣ್ಣದ ಮ್ಯಾಚ್‌ಲೆಸ್ ಒಳಲಂಗ ಹೊರಗೂ ಇಣುಕುವಂತೆ ಉಟ್ಟು ಲಕ್ಷ್ಮಿ ನಡೆದು ಬರುತ್ತಾಳೆ.

ಕೊಂಚ ಒಗರಾಗುವ ಸ್ವರ. ಕೆಲವರನ್ನು ನೋಡಿದಾಗ ಮಾತ್ರ ತುಸುವೇ ಅರಳಿಕೊಳ್ಳುವ ಪರಿಚಯದ ನಗು. ಉಳಿದಂತೆ ತುಟಿ ಬಿಗಿದುಕೊಂಡು, ಮೈ ಬಗ್ಗಿಸಿ ಕೆಲಸ ಮಾಡುತ್ತಲೇ ಇರುವ ಲಕ್ಷ್ಮಿಗೆ ಬೆಳಗು-ಬೈಗು ಒಂದೇ. ಮನೆಗೆಲಸ, ಸುತ್ತ ಇರುವ ಕಚೇರಿಗಳಲ್ಲಿ, ಶಾಲೆಗಳಲ್ಲಿ ಕಸ ಹೊಡೆದು ಶುದ್ಧ ಮಾಡುವ ಕೆಲಸ... ಸದಾ ಕೆಲಸ.

ಲಕ್ಷ್ಮಿಗೆ ಗಂಡ ಬೇಕು ಅನ್ಸಲ್ವಾ ? "ಥೂ ಅದೆಂಥಾ ಗಂಡ ಬಿಡ್ರಿ, ನಮ್ಮಣ್ಣ ನಿತ್ಯ ಅತ್ತಿಗೇನ ಬೈತಾನೆ, ಹೊಡಿತಾನೆ. ಅದೇ ಮದ್ವೆ ಅಂತಂದ್ರೆ ನಾನೊಲ್ಲೆ - ಇಂಗಿರಾದೆ ಚಂದ" ಅಂತಾಳೆ.

"ಲಕ್ಷ್ಮಿ ನಿನ್ನ್ಯಾರೂ ಪ್ರೀತಿಸ್ಲಿಲ್ವಾ?" - "ಅಂಗೆಲ್ಲ ಮಾತಾಡ್ಬಾರ್ದು ಕಣ್ರಾ. ಗಂಡುಸ್ರು ಹಿಡ್ಕಣಾಕೆ ಬತ್ತಾರೆ. ಅದನ್ನೇ ಪ್ರೀತಿ ಅಂತಾರೆ. ಅದೆಲ್ಲ ಸುಳ್ಳೀ... ನಾನಂತೂ ಅವು ಕಾಟದಿಂದ ತಪಿಸ್ಕಂಡಿದ್ದೇ ದೊಡ್ ರಾಮಾಣ್ಯ - ಥೂ...ಛೀ...ವ್ಯಾ..." ಬಾಯಿಗೆ ಸೆರಗೊತ್ತಿ ಮುಸಿ ನಗುತ್ತ ಯಾವುದೋ ಲೋಕದಲ್ಲಿರುವಂತೆ ಧ್ಯಾನಸ್ಥಳಾಗುತ್ತಾಳೆ ಲಕ್ಷ್ಮಿ. ಆಗೆಲ್ಲ ಅವಳ ಕಣ್ಣ ಮುಂದೆ ಎಂದೋ ಸೆರಗು ಹಿಡಿಯಲು ಬಂದ ದುಶ್ಶಾಸನರೇ ಕುಣಿಯುತ್ತಿರಬೇಕು.

ಒಂದು ಕಾಲಕ್ಕೆ ಅಪ್ಪ ಕೊಂಚ ಹಣ ತರ್ತಿದ್ದಾಗ 'ಆಟೋ' ಕೊಂಡಿದ್ದರಂತೆ, ಅದನ್ನೇ ತಮ್ಮಂದಿರು ಓಡಿಸ್ತಿದ್ದರು. ಬರೀ ರಿಪೇರಿ ಬರ್ತಿತ್ತು. ಮಾರಿದ್ದಾಯ್ತು. ಈಗ ಒಬ್ಬ ತಮ್ಮ ಬಾಡಿಗೆ ಆಟೋ ಓಡಿಸ್ತಾನೆ. ಇನ್ನೊಬ್ಬ ಎದ್ದು ಹೋದ, ಅವನು ಕಷ್ಟ - ಸುಖಕ್ಕಿಲ್ಲ. ಇಷ್ಟಾದರೂ ಮನೇಲಿ ಒಪ್ಪತ್ತಿನ ಗಂಜಿ ಕುದ್ದರೆ ಅದೇ ಹಬ್ಬ.

ತಂಗಿಯೊಬ್ಬಳಿದ್ದಾಳೆ. ಲಕ್ಷ್ಮಿಗೆ ಬಾಲದ ಹಾಗೆ ಬರ್ತಾಳೆ - ಹೋಗ್ತಾಳೆ. ಸದಾ ಹೆಸರು ತಿಳಿಯದ ಎಂಥದೋ ರೋಗ. ಅವಳಿಗಿನ್ನೆಂಥ ಮದುವೆ ! ಇದ್ದ ಹಾಗೆ ಇರಲಿ. ನಾಕು ದಿನ ಮಲಗ್ತಾಳೆ ನಾಕು ದಿನ ಅಕ್ಕನ ಹಿಂದೆ ಸುತ್ತುತ್ತಾಳೆ. ಆಯಿತು.

ಆ ತಂಗಿಗಾನ ಒಂದು ದಿಕ್ಕಿರಬೇಕಿತ್ತು ಅನ್ನಿಸುವುದುಂಟು. ಆಗ್ಲಿಲ್ಲಲ್ಲಾ...ಎಲ್ಲ ನಾವು ಪಡಕೊಂಬಂದಷ್ಟು...ನಂಗೇನೋ ಪರವಾಗಿಲ್ಲ, ಈ ತಂಗೀ ಮಾನ ಕಾಯೋದು ಬಹಳ ಕಷ್ಟ ಅನ್ನಿಸಿದೆ. ಕಾಯಿಲೆ ಬೇರೆ ಅವಳಿಗೆ. ಏನೂ ಕೈಲಾಗ್ದು. ಮುಂದೇನಾಗುತ್ತೋ ಇವಳ ಗತಿ ಅನ್ನುವ ಚಿಂತೆ. ಏನೂ ಪರಿಹಾರ ತೋಚದಾಗ ವಿಧಿಯ ಪಾಲಿಗೆ ಹೊಣೆ ಹೊರಿಸಿ ನಿಡುಸುಯ್ಯುವುದಷ್ಟೇ ದಾರಿ.

ಇವತ್ತಿಗೂ ತಡವಾಗಿ ಮನೆಗೆ ಹೋಗೋ ಹಾಗಿಲ್ಲ. ಅಮ್ಮ ಅಬ್ಬರಿಸಿಯಾಳು.

'ಹೆಣ್ಣುಡ್ಗೀರು ಹೊತ್ತು ಗೊತ್ತಿಗೆ ಮನೆ ಸೇರ್ಕಳಿ' ಅಂತಾಳೆ. ಅಮ್ಮನಿಗೆ ಮದ್ವೆ ಆಗದ ಹುಡುಗೀತು ಹೊರಗೆ ಸಂಜೆ ಆದ ಮೇಲೂ ತಿರುಗೋದು ಅಪಾಯ ಅನ್ಸುತ್ತೆ. ಅಮ್ಮನಿಗೆ ಇನ್ನೂ ಇವು ಹುಡ್ಗೀರು ಅನ್ಸುತ್ತೆ. ಮಾನದ ಭಯ. ಅವಳು ಬೈಯ್ತಾಳೆ ಅಂತ ಭಯದಲ್ಲಿ ಮುಸ್ಸಂಜೆ ಒಳಗೆ ಮನೆ ಸೇರಿಕೊಳ್ಳೋದು .... ಮುಂದೆ ? ಗೊತ್ತಿಲ್ಲ.

ಮುಂದೇನಾದ್ರೂ ಇರುತ್ತೇಂತಲೂ ಲಕ್ಷ್ಮಿ ಯೋಚಿಸುವುದಿಲ್ಲ. ಲಕ್ಷ್ಮಿಗೆ ದುಡ್ಡುಕೊಟ್ಟು ಸ್ವಾತಂತ್ರ್ಯಾನೂ ಕೊಟ್ರೆ ಏನ್ಮಾಡ್ತಾಳೆ ?

"ದುಡ್ಡ ? ದುಡ್ಡೇನ್ಮಾಡ್ಲಿ ? ಒಗೂಂದ್ರೆ ಎಲ್ಲೀಗೋಗ್ಲಿ ?" ಆದರೂ ಅಮ್ಮ ಅನ್ನೋ ಮಾತು ದಿಗಿಲು ಹುಟ್ಟಿಸುತ್ತೆ 'ಅಣ್ಣ ನಿಮ್ಮೋನಾದ್ರೂ ಅತ್ತಿಗೆ ನಿಮ್ಮೋಳಾ ? ಮನೆಗೆಲಸ ಮಾಡಕ್ಕೆ ಶಕ್ತಿ ಇರೋತನಕಾ ಹಿಂಗಿರ್ತಾರೆ. ಕೈಕಾಲು ಬಿದ್ರೆ ಕ್ಯಾರೇ ಅಂದಾರಾ? ನಾಳೆ ಜಗಳ ಅಂದ್ರೆ ಏನ್ಮಾಡ್ತೀರಿ. ನಾನಿರೋವರ್ಗೆ ಎಂಗೋ ಆದೀತು. ಆಮೇಲೇನ್ಮಾಡೀರಿ ? ಎಲ್ಲಾನಾ ಅನಾಥ ಆಶ್ರಮ ನೋಡಿ ಸೇರಿಸ್ಬಿಡ್ತೀನಿ' ಅಂತಿರ್ತಾಳೆ ಅಮ್ಮ. ಈಚೆಗೆ ಶ್ಯಾನೆ ಕೆಮ್ತಾಳೆ. ಎಂತ ಕಾಯಿಲೆ ಬಂದದೋ ತಿಳೀದು. ಛತ್ರದೋರೂ ಎಷ್ಟು ದಿನಾಂತ ಬಾಡಿಗೆ ಇಲ್ದೆ ಜಾಗ ಕೊಟ್ಟಾರು ? ಅಮ್ಮನಿಗೆ ಕೆಲಸಾ ಮಾಡೊ ಶಕ್ತೀನೂ ಇಲ್ಲ. ಛತ್ರಾನೂ ಬಿಕೋ ಅಂತಿದೆ. ಜನಾ ಬರ್ತಿಲ್ಲ. ಇನ್ನು ಮ್ಯಾಲೆ ಅದನ್ನೂ ಒಡ್ದು ಏಸಾದೇನೋ ಕಟ್ತಾರಂತೆ. ಮುಂದೇನು ...? ಅಮ್ಮ ಏಳೊ ಆಶ್ರಮ !

ಅಲ್ಲಾ ಆಶ್ರಮ ಎಂಗಿರ್ತದೆ ? ಎಲ್ಲದೆ ? ಚೆನ್ನಾಗಿರ್ತದಾ ? ಅಲ್ಲಿ ಊಟ ಸಿಗ್ತದಾ ? ಲಕ್ಷ್ಮಿ ಹೀಗೆ ಕೇಳ್ತಿರ್ತಾಳೆ ? ಲಕ್ಷ್ಮಿಯಂಥ ಆಸೆಗಳನ್ನು ಕೊಂದುಕೊಂಡ ಅನೇಕರು ಹೀಗೆ ಕೇಳ್ತಿರ್ತಾರೆ. ಇವರೆಲ್ಲ ಎಂಥ ಗೂಡು ಸೇರಿಕೊಳ್ತಾರೋ...

ಲಕ್ಷ್ಮಿಯಂಥವರಿಗೆ ಕಷ್ಟವೂ ಅರ್ಥವಾಗೋಲ್ಲ, ಹೊಂದಿಕೊಂಡು ಬಿಟ್ಟಿರ್ತಾರೆ. ತನ್ನ ಶೋಷಣೆ ಎಲ್ಲಿ ನಡೆದಿದೆ ? ತಾನು ಯಾವುದರಿಂದ ವಂಚಿತಳು ಎಂತಲೂ ತಿಳಿಯುವುದಿಲ್ಲ. ಸುಲಭವಾದ ಕರ್ಮ ಸಿದ್ಧಾಂತವೊಂದು ಅವರದೇ ಮಾತಿನಲ್ಲಿ 'ವಿಧಿ' 'ದೈವ' 'ಪಡಕೊಂಡು ಬಂದದ್ದು' ಆಗಿ ನೆರವಿಗೆ ಬಂದಿರುತ್ತೆ.

# ಮಹಿಳಾಚಳವಳಿಯ ಕೆಲವು ಅಘೋಷಿತ ಗುರಿಗಳು

ಮಹಿಳಾ ಚಳುವಳಿಯು ತನ್ನ ಆರಂಭಕಾಲದಲ್ಲಿ ಮುಂದಿಟ್ಟುಕೊಂಡಿದ್ದ ಒಂದು ಮುಖ್ಯ ತಾತ್ವಿಕತೆ - ವೈಯಕ್ತಿಕವು ರಾಜಕೀಯದ್ದೂ ಆಗಿರುತ್ತದೆ ಎಂಬುದು. (The personal is political) ಅದುವರೆಗೆ 'ಖಾಸಗಿ' ಎಂಬುದು 'ಸಾರ್ವಜನಿಕ' ವಲಯಕ್ಕಿಂತ ತೀರಾ ಭಿನ್ನ ಹಾಗೂ ಪ್ರತ್ಯೇಕ ಎಂಬುದು ಬಲವಾದ ನಂಬಿಕೆಯಾಗಿತ್ತು. ಆದರೆ ಮಹಿಳಾ ಚಳವಳಿಗಾರರು ಖಾಸಗಿ, ಆದ್ದರಿಂದ ರಾಜಕೀಯದಿಂದ ಮುಕ್ತವೆಂದು ನಂಬಿದ್ದ 'ಕುಟುಂಬ' ವ್ಯವಸ್ಥೆಯ ಸಂರಚನೆಯೊಳಗೇ ಲಿಂಗರಾಜಕೀಯ ನೇಯ್ದುಕೊಂಡಿದೆ, ಇದರ ಮೂಲ ಪಿತೃಪ್ರಧಾನ ವ್ಯವಸ್ಥೆಯಾಗಿದ್ದು, ಈ ರಾಜಕೀಯದಿಂದಾಗಿ ಮಹಿಳೆಯ ಶೋಷಣೆ ವ್ಯವಸ್ಥಿತವಾಗಿ ನಡೆದುಬಂದಿದೆ ಎಂಬುದನ್ನು ಬೆಳಕಿಗೆ ತಂದರು.

ಬದುಕನ್ನು ಸಾರ್ವಜನಿಕ / ಖಾಸಗಿ ಎಂದು ಪ್ರತ್ಯೇಕವಲಯಗಳಲ್ಲಿ ವಿಂಗಡಿಸುವುದಕ್ಕೆ ಇಂಥ ಪ್ರತ್ಯೇಕತೆ ಮಾನವರ ಬದುಕಿಗೆ ಅವಶ್ಯಕ ಎಂಬ ನಂಬಿಕೆ ಕಾರಣವಾಗಿತ್ತು. ಪ್ರತಿಯೊಂದು ಕ್ರಿಯೆಗೂ ಅದರದೇ ಆದ ಜಾಗವಿರತಕ್ಕದ್ದು ಎಂಬ ಈ ನಂಬಿಕೆಯ ಮೂಲಕ ಅವಶ್ಯಕತೆ / ಸ್ವಾತಂತ್ರ್ಯ ನಿಶ್ವರ / ಶಾಶ್ವತ, ಅವಹೇಳನಕಾರಿ / ಗೌರವಯುಕ್ತ - ಮುಂತಾಗಿ ದ್ವಂದ್ವ ವೈರುಧ್ಯಗಳ ಮೂಲಕ ಆ ಎರಡು ವಲಯಗಳನ್ನು ಪ್ರತಿನಿಧಿಸುವುದು ನಡೆದಿತ್ತು. 'ಹೊರ'ಗೆ ದುಡಿದು, ಗಳಿಸಿ, ವ್ಯವಹರಿಸಿ ದಣಿದು ಬರುವ ಪುರುಷರಿಗೆ ನೆಮ್ಮದಿ, ವಿಶ್ರಾಂತಿ, ಸೇವಾಸುಖಗಳನ್ನು ನೀಡುವ ಜಾಗ 'ಮನೆ', ಹೊರ ಜಗತ್ತಿನ ಯುದ್ಧ, ಕಲಹ, ಪೈಪೋಟಿ, ಸ್ಪರ್ಧೆಗಳ ಆತಂಕಕ್ಕೆ ಒಂದು ಪರಿಹಾರದ ರೂಪದಲ್ಲಿ ಪ್ರೀತಿ, ಶಾಂತಿ, ಸೇವೆಗಳ ತಾಣವಾಗಿರುತ್ತೆ 'ಕುಟುಂಬ' ಎಂಬ ಬಹು ಆದರ್ಶೀಕೃತ ರಮ್ಯತೆಯಲ್ಲಿ ಕುಟುಂಬದ ವೈಭವೀಕರಣ ಒಂದು ನಿಟ್ಟಿನಿಂದ ನಡೆದಿದ್ದರೆ, ರಾಜ್ಯದ ಆಡಳಿತ, ಅಧಿಕಾರ, ವ್ಯವಹಾರಗಳ ದೃಷ್ಟಿಯಿಂದ ಯಾವ ಲೆಕ್ಕಕ್ಕೂ ಬರದಂಥ ತಿರಸ್ಕಾರಕ್ಕೂ ಇದೇ ಕುಟುಂಬ, ಅದರೊಳಗಿನ ಜೀವನ, ಒಳಗಾಗುತ್ತಿತ್ತು.. ಮಹಿಳಾ ಚಳವಳಿಗಾರರು 'ಕುಟುಂಬ' ಎಂಬ ಖಾಸಗಿ ಸಂಸ್ಥೆಯ ರತ್ನಗಂಬಳಿ ತಳದಲ್ಲಿ ಅಡಗಿಸಿಟ್ಟ ಅಸಂಖ್ಯಾತ ಅನ್ಯಾಯ, ತಾರತಮ್ಯ, ಅವ್ಯವಸ್ಥೆಗಳನ್ನು ಎತ್ತಿ ಕಪಾಟಿನಲ್ಲಿಟ್ಟು 'ಸಾರ್ವಜನಿಕ'ವಾಗಿ ಪ್ರದರ್ಶಿಸಲು ಪ್ರಾರಂಭಿಸಿದರು. ಇದರಿಂದಾಗಿ ಮಾನವ ಚರಿತ್ರೆಯಲ್ಲೇ ಅತ್ಯಂತ ಪವಿತ್ರ ಸಾಮಾಜಿಕ ಸಂಸ್ಥೆ ಎಂಬ ಘನತೆಗೇರಿಸಲ್ಪಟ್ಟಿದ್ದ 'ಕುಟುಂಬ'ದ ತಳ ಕುಸಿಯ ತೊಡಗಿತು. ಸಂಪ್ರದಾಯಸ್ಥ ಸಮಾಜಗಳಿಗೆ ಕುಟುಂಬ ಸಂಸ್ಥೆಯೇ ನಾಶವಾಗಿಬಿಡುತ್ತದೆ ಎಂಬ ದಿಗಿಲು , ಆತಂಕ ಹುಟ್ಟಿತು.

ಭಾರತದಂಥ ಸಾಂಪ್ರದಾಯಿಕತೆಗೆ ಇಂದಿಗೂ ಬಲವಾಗಿ ಆತುಕೊಂಡಿರುವಂಥ ಬಹುಸಂಸ್ಕೃತಿಯ ಉಪಖಂಡದಲ್ಲಿ ಮಹಿಳಾ ಚಳವಳಿ ಕಳೆದ ಎರಡೂವರೆ ದಶಕಗಳಿಂದ ಬೆಳೆಯುತ್ತಾ ಬಂದಿದೆ. ಆದರೂ ಸಾಮಾನ್ಯಜನರು, ವಿದ್ಯಾವಂತರು, ಅಲ್ಲದವರಾದಿಯಾಗಿ ಬಹುಮಟ್ಟಿಗೆ ಸ್ತ್ರೀವಾದಿಗಳೆಂದರೆ ಮನೆಮುರುಕಿಯರೆಂದೇ ದಿಗಿಲು, ಆಘಾತಗಳನ್ನು ಪ್ರದರ್ಶಿಸುವುದಕ್ಕೆ ಬಹುಶಃ ಪಶ್ಚಿಮ ದೇಶಗಳ ಆ ರೀತಿಯ ಚರಿತ್ರೆಯೇ ದೊಡ್ಡ ಕಾರಣವಿರಬಹುದು. ಮಾತಿಲ್ಲದೆ ವಿಧೇಯತೆಯಿಂದ ತಮ್ಮ ಅಧೀನದಲ್ಲಿ, ಅಂಕೆಯಲ್ಲಿ ಉಳಿದಿದ್ದ ಸ್ತ್ರೀಯರಲ್ಲಿ ಸ್ವಪ್ರಜ್ಞೆ ಎಚ್ಚರಗೊಂಡರೆ, ಆಕೆ ತನ್ನನ್ನು ಹೇಗೆ ದಮನಗೊಳಿಸಲಾಗಿದೆ ಎಂಬ ಅರಿವನ್ನು ಬೆಳೆಸಿಕೊಂಡರೆ, ಅಂಥ ದಮನವನ್ನು ಪ್ರಶ್ನಿಸಿ, ಪ್ರತಿರೋಧಿಸ ತೊಡಗಿದರೆ, ರೂಢಿಗತವಾದ ತಮ್ಮ ಯಜಮಾನಿಕೆ/ಅಹಂಗಳಿಗೆ ಧಕ್ಕೆ ಬರುತ್ತದೆಂಬ ಆತಂಕ ಸಂಪ್ರದಾಯಸ್ಥ ಮನೋಭಾವದ ಪುರುಷರಲ್ಲಿ ಹೇಗೋ ಹಾಗೆಯೇ, ಅದೇ ಬದುಕನ್ನು ಒಪ್ಪಿಕೊಂಡು, ಅದನ್ನೇ ಮುಂದುವರೆಸಲು ಬಯಸುವ ಸ್ತ್ರೀಯರೂ ತಮ್ಮ ಸ್ವತಂತ್ರ ಬದುಕಿನ ಸಾಧ್ಯತೆಗಳ ಬಗ್ಗೆ ಆತಂಕ, ಕಳವಳ, ಅದು ಅಧರ್ಮ, ಅನೈತಿಕ ಎಂಬ ಭೀತಿಯನ್ನು ಪ್ರಕಟಿಸುವುದು ನಮ್ಮ ಸಮಾಜದಲ್ಲಿ ಇಂದಿಗೂ ಬಲವಾಗಿಯೇ ಕಂಡುಬರುತ್ತದೆ.

ಕುಟುಂಬ, ಸಮಾಜಗಳಲ್ಲಿ ಮುಖ್ಯ ಜಾಗಗಳಲ್ಲಿ ಪುರುಷರೇ ಅಧಿಕಾರ ಹೊಂದಿರುವ ನಮ್ಮ ಸಮಾಜದಲ್ಲಿ ಎಲ್ಲಾ ಸ್ಥಿತಿಯಲ್ಲೂ ಪುರುಷರೇ ಏಕಾಧಿಕಾರ ಹೊಂದಿದ್ದಾರೆಂಬುದಿಲ್ಲ. ಮಾತೃತ್ವದ ಬೇರೆ ಬೇರೆ ರೀತಿಗಳಲ್ಲಿ ಸ್ತ್ರೀಯರೂ ಅಧಿಕಾರದ ರುಚಿ ಹೊಂದಿರುತ್ತಾರೆನ್ನುವುದು ನಿಜ. ಪಶ್ಚಿಮಕ್ಕೆ ಪರಿಚಯವೇ ಇಲ್ಲದಿರುವಂಥ ಹಿರಿತನಕ್ಕೇ ಪರಮಾಧಿಕಾರ ಯಜಮಾನಿಕೆ ನೀಡಿರುವ ಒಟ್ಟು ಕುಟುಂಬದ ವ್ಯವಸ್ಥೆಯಿಂದ ಬೆಳೆದುಬಂದ ಕೌಟುಂಬಿಕ ಸಂಬಂಧಗಳು ಇಂದಿಗೂ ಕ್ರಿಯಾಶೀಲವಾಗಿರುತ್ತವೆ. ಗಂಡ-ಹೆಂಡತಿ-ಮಕ್ಕಳು ಮಾತ್ರ ಇರುವ ಕಿರುಕುಟುಂಬದ ಆದರ್ಶ ಇನ್ನೂನಗರಗಳಿಗೆ ಸೀಮಿತವಾಗಿದೆ.. ಆದ್ದರಿಂದ ಲೈಂಗಿಕತೆಯನ್ನು ಬಿಂದುವಾಗಿಟ್ಟುಕೊಂಡು ಸ್ತ್ರೀಯರು, ಪುರುಷರೂ ಸಮಾನ

ಸ್ವಾತಂತ್ರ ವ್ಯಕ್ತಿಗಳು ಎಂಬ ವ್ಯಕ್ತಿನಿಷ್ಠವಾದದ ತುಟ್ಟತುದಿಯ ನೆಲೆಯಿಂದ ಪಶ್ಚಿಮದಲ್ಲಿ ಹುಟ್ಟಿ ಬೆಳೆದ ಸ್ತ್ರೀವಾದದ ಆ ವಿಚಾರಧಾರೆಯೇ ನಮ್ಮ ಸಮಾಜಕ್ಕೆ ಅರ್ಥವಾಗದ ಆದ್ದರಿಂದ ಅಗ್ರಾಹ್ಯವೂ ಆಗಿರುವುದು ಒಂದು ರೀತಿ.

ಆದರೂ ಲಿಂಗರಾಜಕೀಯದ ತಾತ್ವಿಕತೆಯನ್ನು ಬಳಸಿಕೊಳ್ಳುತ್ತ, ದೇಶೀಯ ಸಂದರ್ಭಗಳಿಗೆ ಅವುಗಳನ್ನು ಪರಿಷ್ಕರಿಸಿ ಬಳಸುತ್ತಾ ಇಲ್ಲಿನ ಮಹಿಳಾ ಚಳುವಳಿ ಸಾಗಿ ಬಂದಿದೆ. ಉದಾಹರಣೆಗೆ ಲೈಂಗಿಕ ಸ್ವಾತಂತ್ರ್ಯದ ಪ್ರಶ್ನೆಗಿಂತಲೂ ವಿವಾಹ ವ್ಯವಸ್ಥೆ, ವರದಕ್ಷಿಣೆ, ವಿಚ್ಛೇದನೆಗಳಿಗೆ ಸಂಬಂಧಿಸಿದ ಕಾನೂನುಗಳ ಬದಲಾವಣೆಗೆ ಹಕ್ಕೊತ್ತಾಯಿಸುವುದು, ಲೈಂಗಿಕವಾಗಿ ಹೆಣ್ಣನ್ನು ಹಿಂಸಿಸುವ ಬಗೆಗಳನ್ನು ಅತ್ಯಾಚಾರ, ಹೊಡೆತಬಡಿತ, ಕೊಲೆ ಮುಂತಾದುವನ್ನು ಬಲವಾಗಿ ಪ್ರತಿರೋಧಿಸುವುದು, ನಿರ್ಗತಿಕ ಸ್ತ್ರೀಯರಿಗೆ ಪರ್ಯಾಯ ಜೀವನ ಸಾಧ್ಯತೆಗಳನ್ನು ಕಟ್ಟಿಕೊಡುವುದು, ಮೊದಲಾದ ಯತ್ನಗಳು ನಗರ ಕೇಂದ್ರಿತ ಮಹಿಳಾ ಸಘಟನೆಗಳಿಗೆ ಅವಶ್ಯಕ ಕಾರ್ಯಕ್ರಮಗಳಾದವು. ಹಳ್ಳಿಗಳಲ್ಲಿ ಈ ಚಳವಳಿಗಳು ಕಾರ್ಯಕರ್ತರು ನಿರಕ್ಷರಿಗಳ್ನು ಅಕ್ಷರಸ್ತರನ್ನಾಗಿಸುವ, ಅವರಿಗೆ ಉದ್ಯೋಗ ತರಬೇತಿಗಳನ್ನು ನೀಡಿ, ಸ್ವತಂತ್ರ ಆದಾಯಗಳನ್ನು ಹೊಂದಿರುವ, ಪರ್ಯಾಯ ಜೀವನವನ್ನು ಆರೋಗ್ಯ, ಸಂತಾನ ನಿಯಂತ್ರಣಾದಿಗಳ ತಿಳುವಳಿಕೆಯನ್ನು ಬೆಳೆಸುವಂಥ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಈ ನಿಟ್ಟಿನಿಂದ ನೋಡಿದಾಗ - ಆಧುನಿಕ ಬಂಡವಾಳಶಾಹಿ ಆರ್ಥಿಕ ವ್ಯವಸ್ಥೆಯು ಹುಟ್ಟುಹಾಕಿರುವ ಹಣದ/ಲಾಭದ ಏಕೈಕ ಗುರಿ ಹೊಂದಿರುವ, ಮಾನವೀಯತೆ ಅರ್ಥಹೀನವಾಗಿಬಿಡುತ್ತಿರುವ ಪರಿಸರದಲ್ಲಿ ವಿವಾಹ ವಿಚ್ಛೇದನೆಗಳು ಹೆಚ್ಚುತ್ತಿದ್ದರೆ, ಅದೆಲ್ಲಕ್ಕೂ ಮಹಿಳಾ ಚಳವಳಿಯೇ ಕಾರಣವೆಂದು ಭಾವಿಸುವುದು ತೀರಾ ಅಪ್ರಬುದ್ಧ ಗ್ರಹಿಕೆಯಷ್ಟೇ ಆಗಬಲ್ಲದು ಹಾಗೆಂದು ರೂಢಿಗತ ಸಾಮಾಜಿಕ ವ್ಯವಸ್ಥೆಯಲ್ಲಿ ಅದು ಅನೇಕ ತಳಮಳಗಳನ್ನು ತಂದಿದೆ ಎಂಬುದನ್ನು ಅಲ್ಲಗಳೆಯಲಾಗದು.

ಮಹಿಳಾ ಚಳವಳಿ ಎಲ್ಲಾ ವರ್ಗಮ ಜಾತಿ, ಜನಾಂಗ, ಧರ್ಮ, ಪ್ರದೇಶ, ಭಾಷೆಗಳಂಥ ಅಡ್ಡಗೋಡೆಗಳನ್ನು ಒಡೆದು ಮುನ್ನಡೆದ ಚಳುವಳಿ. ಸಮಗ್ರ ಮಾನವಕುಲವನ್ನು ಒಂದೇ ಎಂದು ಪರಿಗಣಿಸುವ ವಿಶಾಲ ಮಾನವೀಯತಾವಾದದ ಮೇಲೆ ಅದು ಬೆಳೆದಿದೆ. ಅದೇ ಕಾರಣದಿಂದಾಗಿ ಸಾಂಸ್ಕೃತಿಕ ಪರಿವರ್ತನೆಗಳನ್ನು ಉಂಟು ಮಾಡುವ ಪ್ರಕ್ರಿಯೆಯಲ್ಲಿ ಅನೇಕ ಸಂಕೀರ್ಣ ಸ್ವರೂಪದ ಸವಾಲುಗಳನ್ನೂ ವಿರೋಧಗಳನ್ನೂ ಅದು ಎದುರಿಸುವುದು ಅನಿವಾರ್ಯವಾಗಿದೆ. ಬದಲಾವಣೆಗಳಿಂದಾಗಿ ಏಳುವ ಪ್ರಶ್ನೆಗಳೆಲ್ಲಕ್ಕೂ ಸಿದ್ಧಪಡಿಸಿದ ನೀಟಾದ ಉತ್ತರ ಕೊಟ್ಟು ಪಾರಾಗುವುದು ಅಸಾಧ್ಯ, ಆದ್ದರಿಂದಲೇ ಮಹಿಳಾ ಚಳವಳಿಯಿಂದ ಆಗುತ್ತಿರುವ, ಅಥವಾ ಅದು ಉಂಟುಮಾಡಲು ಬಯಸುತ್ತಿರುವ ಬದಲಾವಣೆಗಳು ಸಾಂಸ್ಕೃತಿಕವಾಗಿ ಎಷ್ಟು ಸಂಕೀರ್ಣ ಸ್ವರೂಪದ್ದಾಗಿವೆ ಎಂಬುದನ್ನು ಗಮನಕ್ಕೆ ತೆಗೆದುಕೊಂಡು ಮುಕ್ತ ಮನಸ್ಸಿನಿಂದ ಆ ಸಮಸ್ಯೆ / ಪ್ರಶ್ನೆಗಳನ್ನು ಪರೀಶೀಲಿಸುವುದು ಅವಶ್ಯಕವಾಗುತ್ತದೆ.

ಸ್ತ್ರೀವಾದ ಮತ್ತು ಅದರೊಂದಿಗೆ ಮಹಿಳಾಚಳವಳಿ ಕೂಡ ತನ್ನ ಬೆಳವಣಿಗೆಯ ಹಂತಗಳಲ್ಲಿ ಉದ್ದಕ್ಕೂ ಎದುರಿಸುತ್ತಾ ಬಂದಿರುವ, ಬಹುವಿವಾದಗ್ರಸ್ತವಾದ ಪ್ರಶ್ನೆ ಸೆಕ್ಸ್-ಜೆಂಡರ್-ವರ್ಗ-ದ ಪ್ರಶ್ನೆ. ಈ ಪರಿಕಲ್ಪನೆಗಳಿಗೆ ಅರ್ಥವ್ಯಾಖ್ಯಾ ಮಾಡುವಲ್ಲಿಯೇ ಸ್ತ್ರೀವಾದದ ಹಲವು ಕವಲುಗಳು ಅಸ್ತಿತ್ವಕ್ಕೆ ಬಂದವು. ಜೀವಶಾಸ್ತ್ರೀಯವಾಗಿ ಇರುವ ಲಿಂಗಭಿನ್ನತೆಗಳಿಂದಾಗ, ತನ್ನ ಸಂತಾನೋತ್ಪಾದಕ ಲಕ್ಷಣದ ಮೂಲಕವಾಗಿಯೇ ಮಹಿಳೆ ಪುರುಷನಿಂದ ಲೈಂಗಿಕವಾಗಿ ಹತ್ತಿಕ್ಕಲ್ಪಟ್ಟಳೆಂಬ ಫೈರ್‌ಸ್ಟೋನಳ ವಾದ ಒಂದು ಬಗೆಯದಾದರೆ ಲೈಂಗಿಕ ಭಿನ್ನತೆ (ಸೆಕ್ಸ್) ಪಿತೃಪ್ರಾಧಾನ್ಯದಲ್ಲಿ ಲಿಂಗಭೇದ ಸಂರಚನೆ (ಜೆಂಡರ್) ಯಾಗಿ ಬೆಳೆದಿರುತ್ತದೆನ್ನುವ ಕೇಟ್ ಮಿಲೆಟ್ ಮಹಿಳಾ ಶೋಷಣೆಯೆಂಬುದಕ್ಕೆ 'ಆದ್ಯಂತವಾಗಿ ಪಿತೃಪ್ರಧಾನ ವ್ಯವಸ್ಥೆಯನ್ನೇ ಹೊಣೆಯಾಗಿ ಭಾವಿಸಿದ್ದು ಇನ್ನೊಂದು ಬಗೆ. ಈ ರೀತಿ ಜೀವಶಾಸ್ತ್ರ ಅಥವಾ ಪಿತೃಪ್ರಾಧಾನ್ಯಗಳಿಗೆ ಸ್ವಾಯತ್ತ ಅಧಿಕಾರ ಕೊಡುವ ವಾದಗಳು ಅಚಾರಿತ್ರಿಕವಾಗಿವೆ ಎಂದು ಖಂಡಿಸುವ ಮಾರ್ಕ್ಸ್‌ವಾದಿ ಸ್ತ್ರೀವಾದಿಗಳು ಮಹಿಳಾ ಶೋಷಣೆಯು ಬಂಡವಾಳಶಾಹಿ ಪಿತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಬೇರನ್ನು ಹೊಂದಿದೆಯೆಂದೂ ಅದು ಚಾರಿತ್ರಿಕವಾಗಿ ಉತ್ಪಾದನಾ ವ್ಯವಸ್ಥೆ, ವರ್ಗಗಳಿಗೆ ಹೊಂದಿಕೊಂಡು ಬದಲಾಗುತ್ತಾ ಇದೆಯೆಂದೂ ಪ್ರತಿಪಾದಿಸಿದರು.

ವರ್ಗ ಸಂಘರ್ಷಕ್ಕೂ ಜೆಂಡರ್ ವ್ಯವಸ್ಥೆಗೂ ಇರುವ ಸಂಬಂಧವೇನೆಂದು ವಿವರಿಸುವಾಗ ಗೃಹಕಾರ್ಮಿಕ ತತ್ವವು ರೂಪುತಳೆಯಿತು. ಮಹಿಳೆಯರ ಶೋಷಣೆ ವರ್ಗ ಶೋಷಣೆಯ ರೀತಿಯಲ್ಲಿ ಬಂಡವಾಳಶಾಹಿ ವ್ಯವಸ್ಥೆಯಲ್ಲೇ ಸೇರಿಹೋಗಿರುವ ಒಂದು ಲಕ್ಷಣ. ಸ್ತ್ರೀಯರು ಗೃಹಕಾರ್ಮಿಕರು, ಕೌಟುಂಬಿಕ ಚೌಕಟ್ಟಿನ ಒಳಗೆ ತಮ್ಮ ಯಜಮಾನರಾದ ಪುರುಷರಿಗಾಗಿ ದುಡಿಯುತ್ತಾ ಅವರಿಂದ ದಮನ, ಶೋಷಣೆಗೆ ಇವರು ಒಳಗಾಗುತ್ತಿರುತ್ತಾರೆ. ಇವರನ್ನು ಸಾಕಲು ಪುರುಷರಿಗೆ ಆಗುವ ಖರ್ಚು ವೆಚ್ಚಕ್ಕಿಂತ ಎಷ್ಟೋ ಹೆಚ್ಚುವರಿ ದುಡಿಮೆ

ಇವರು ಮಾಡುತ್ತಾರೆ. ಈ ಹೆಚ್ಚಿನ ದುಡಿಮೆಯ ಶಕ್ತಿ ವೇತನರಹಿತವಾದದ್ದು. ಆದ್ದರಿಂದ ಇಂಥ ಕೂಲಿ ರಹಿತ ದುಡಿಮೆಯಿಂದಲೂ ಪೀಳೀಗೆಗಳನ್ನು ಸೃಷ್ಟಿಸಿ ಒದಗಿಸುವ ಮೂಲಕವೂ ಬಂಡವಾಳಶಾಹಿಗೆ ಬೇಕಾಗಿರುವ ದುಡಿಮೆ ಶಕ್ತಿನ್ನು ಇವರು ಒದಗಿಸುತ್ತಾರೆ. ಸ್ತ್ರೀ-ಪುರುಷರ ಸಂಬಂಧಗಳು ಇಲ್ಲಿ ಜೆಂಡರ್ ಮೂಲಕವಾಗಿ ಆಳಿಸಿಕೊಳ್ಳುವವರು-ಆಳುವವರ ಸಂಬಂಧಗಳಾಗಿ ರೂಪುಗೊಂಡಿರುತ್ತವೆ ಎಂದು ಪ್ರತಿಪಾದಿಸುತ್ತಾರೆ ಮಾರ್ಕ್ಸ್‌ವಾದಿ ಸ್ತ್ರೀವಾದಿಗಳು.

ಪಿತೃಪ್ರಾಧಾನ್ಯವೇ ಸ್ತ್ರೀಶೋಷಕ ಲಕ್ಷಣದ್ದು ಎಂಬ ದೃಷ್ಟಿ ಚಾರಿತ್ರಿಕ ಬೆಳವಣಿಗೆಗಳನ್ನು ನಿರ್ಲಕ್ಷಿಸಿದ್ದರೆ ಪಿತೃಪ್ರಾಧಾನ್ಯ, ಬಂಡವಾಳಶಾಹಿಗಳೆರಡೂ ಒಟ್ಟಾಗಿ ಲಿಂಗಸಂಬಂಧಗಳನ್ನು ಬಂಡವಾಳದ ಶಕ್ತಿಸಾಧನಗಳಾಗುವಂತೆ ಮಾಡುತ್ತವೆಂದು ಹೇಳುವ ದೃಷ್ಟಿ ಬಂಡವಾಳಶಾಹಿಯ ಶ್ರಮವಿಭಜನೆಯಲ್ಲೇ ಅಂತರ್ಗತವಾಗಿ ಜೆಂಡರ್ ವ್ಯವಸ್ಥೆ ನೇಯ್ದುಕೊಂಡಿರುತ್ತದೆಂದು ಭಾವಿಸುತ್ತದೆ. ಈ ರೀತಿಯಲ್ಲಿ ನೋಡಿದಾಗ ಭಾರತದ ಮಹಿಳೆಯರ ದೃಷ್ಟಿಯಿಂದ ಒಪ್ಪಲು ಸಾಧ್ಯವಿರುವ ಅನೇಕ ಅಂಶಗಳನ್ನು ಜಾಗತಿಕವಾದ ಮಹಿಳಾ ಚಳವಳಿ ಒಳಗೊಂಡದ್ದು ಕಾಣಿಸುತ್ತದೆ. ಉದಾಹರಣೆಗೆ ಮನೆಯೊಳಗಿನ ಮಹಿಳೆಯ ದುಡಿಮೆ ಒಟ್ಟಾರೆಯಾಗಿ ದುಡಿಮೆಯೇ ಅಲ್ಲ; ಒಂದು ವೇಳೆ ಅವರು ಹೊರಗೆ ಮಾಡುವ ದುಡಿಮೆಗೆ ಬೆಲೆಯಿದ್ದರೂ ಅದು ಅಗ್ಗದ್ದು. ಯಾವಾಗ ಬೇಕಾದರೂ ಅದನ್ನು ಬದಲಿಸಬಹುದು, ಕೈಬಿಡಲೂಬಹುದು. ಆದ್ದರಿಂದಲೇ ಒಂದು ದುಡಿಮೆ ವ್ಯವಸ್ಥೆಯೊಳಗೆ ಆರ್ಥಿಕ ವೆಚ್ಚದ ದೃಷ್ಟಿಯಿಂದ ಮೊದಲು ಕೆಲಸಕ್ಕೆ ನೇಮಕಗೊಳ್ಳುವವರು ಮಹಿಳೆಯರೇ ಆದರೂ, ತಾಂತ್ರಿಕಸಿದ್ಧಿಹೆಚ್ಚತೊಡಗಿದಂತೆ ಮೊದಲು ಕೆಲಸದಿಂದ ಕಿತ್ತೊಗೆಯಲ್ಪಡುವವರೂ ಮಹಿಳೆಯರೇ ಆಗಿರುತ್ತಾರೆ ಎಂದು ಸ್ತ್ರೀವಾದಿಗಳು ಪ್ರತಿಪಾದಿಸುವ ವಿಚಾರ ಭಾರತದ ಸಂದರ್ಭದಲ್ಲಿ ತುಂಬ ನಿಜವಾಗುತ್ತದೆ. ನಮ್ಮಲ್ಲಿ ಮಹಿಳೆಯರು ಕೌಟುಂಬಿಕ ಚೌಕಟ್ಟಿನೊಳಗೆ ಪುರುಷರಿಗೆ ಅಧೀನವಾಗಿ ಉಳಿದಿರುವುದೇ ಮಾನ್ಯವೆನಿಸುತ್ತದೆ. ಆರ್ಥಿಕವಾಗಿ ಪುರುಷರನ್ನು ಅವಲಂಬಿಸಿ ಬದುಕುವುದೇ (ಅವರೂ ದುಡಿದು ಗಳಿಸುತ್ತಿದ್ದಾಗ ಕೂಡ) ಒಳ್ಳೆಯ ಗೃಹಿಣಿತ್ವದ ಮಾನದಂಡವೆನಿಸಿದೆ. ಮನೆಗೆಲಸಕ್ಕಾಗಿ ಮಹಿಳೆಯರು ವ್ಯಯಿಸುವ ಶ್ರಮ ಶಕ್ತಿಯ ಬಹುಪಾಲು ಯಾವುದೇ ಹಣದ ಲೆಕ್ಕಕ್ಕೆ ಒಳಪಡದೆ ಇರುವಂಥದು.

ಬಹುತೇಕ ಉದ್ಯೋಗದಲ್ಲಿರುವ ಮಹಿಳೆಯರ ಸ್ಥಿತಿಕೂಡ ಹೆಚ್ಚು ಭಿನ್ನವಾಗಿರುವುದಿಲ್ಲ. ದೇಶದ ಅನೇಕ ಪ್ರದೇಶಗಳಲ್ಲಿ ಮಹಿಳೆಯರಿಗೆ ಪೂರ್ತಿಯಾಗಿ ಉದ್ಯೋಗ ನಿರಾಕೃತವಾಗಿದೆ. ಹೊಸ ತಾಂತ್ರಿಕತೆ ಬೆಳೆದ ಹಾಗೆ ಇರುವ ಉದ್ಯೋಗಗಳಿಗೂ ಪುರುಷರಿಗೆ ಆದ್ಯತೆ ನೀಡುವ ಒತ್ತಡ ತೀವ್ರವಾಗಿಯೇ ಇರುತ್ತದೆ. ರಾಜ್ಯವೊಂದರ ಆಡಳಿತ ಸೂತ್ರ ನಿರ್ವಹಿಸುವ ಮುಖ್ಯಮಂತ್ರಿಯೋ ಅಥವಾ ಅವರ ಸಚಿವ ಮಂಡಳಿಯ ಸದಸ್ಯರೋ ನಿರುದ್ಯೋಗವನ್ನು ದೇಶದಿಂದ ತೊಡೆದುಹಾಕಲು ಮೊದಲು ಮಹಿಳೆಯರನ್ನೆಲ್ಲ ಮನೆಗೆ ಕಳಿಸಿ, ಆ ಜಾಗಕ್ಕೆ ಪುರುಷರನ್ನು ನೇಮಿಸಬೇಕೆಂದು ಇಂದಿಗೂ ಹೇಳಿಕೆ ಕೊಡುವುದನ್ನು ನೋಡಿದರೆ 9 ಪಂಚವಾರ್ಷಿಕ ಯೋಜನೆಗಳನ್ನು ಮುಗಿಸಿಕೂತ ಭಾರತದಲ್ಲಿ ಮಹಿಳಾ ಪ್ರಗತಿ ಎಷ್ಟೆನ್ನುವುದು ಸ್ಪಷ್ಟವಾಗಬಲ್ಲದು. 1901 ರ ಜನಗಣತಿ ವರದಿ ಪ್ರಕಾರ ದೇಶದ ದುಡಿಮೆ ಶಕ್ತಿಯ 50% ರಷ್ಟು ಮಹಿಳೆಯರದಾಗಿತ್ತು. (1000 ಪುರುಷರಿಗೆ 525 ಜನ ಸ್ತ್ರೀಯರು ಉದ್ಯೋಗಸ್ಥರು) ಅದೇ 1971ರ ವೇಳೆಯವರದಿ ಪ್ರಕಾರ ಪ್ರತಿ 1000 ಪುರುಷರಿಗೆ 210 ಮಹಿಳೆಯರು ಮಾತ್ರ ಉದ್ಯೋಗದಲ್ಲಿದ್ದರು.

ಅಸಂಘಟಿತ ದುಡಿಮೆ ಕ್ಷೇತ್ರದಲ್ಲಿ ಪುರುಷರ ಕೂಲಿಯ ಅರ್ಧದಷ್ಟಕ್ಕೇ ಮಹಿಳೆಯರು ದುಡಿಯ ಬೇಕಾಗಿದ್ದು ಮಹಿಳೆಯರನ್ನು ಕೆಲಸಕ್ಕೆ ತೆಗೆದುಕೊಳ್ಳುವುದೇ ಯಜಮಾನರಿಗೆ ಇದು ಅನುಕೂಲಕರ. ಆದರೆ ಗಂಡಸರು ತಮಗೇ ಆದ್ಯತೆ ನೀಡಬೇಕೆಂದು ಒತ್ತಡಹೇರುವ ಸ್ಥಿತಿ ಇದರಿಂದ ನಿರ್ಮಾಣವಾಗುತ್ತದೆ. ಮಹಿಳೆಯರಿಗೆ ಹೆರಿಗೆ ರಜೆ, ಭತ್ಯೆ, ಮತ್ತಿತರ ಸವಲತ್ತುಗಳನ್ನು ಕೊಡಬೇಕಾಗಿರುವ ನಿಯಮ ಸಂಘಟಿತ ದುಡಿಮೆ ಕ್ಷೇತ್ರದಲ್ಲಿದೆ. ರಾತ್ರಿ ಪಾಳಿಯನ್ನು ಮಹಿಳೆಯರಿಗೆ ನೀಡಬಾರದೆಂಬಂದೂ ಇದೆ. ಇಂಥ ಕಾರಣಗಳಿಂದಾಗಿ ಮಾಲಿಕವರ್ಗವು ಸ್ತ್ರೀಯರನ್ನು ಉದ್ಯೋಗಕ್ಕೆ ನೇಮಿಸಿಕೊಳ್ಳುವುದನ್ನು ತಪ್ಪಿಸುವುದೂ ಉಂಟು. ವೃತ್ತಿಗಳ ಲಿಂಗಾಧಾರಿತ ವಿಭಜನೆ, ಮೀಸಲಾತಿ ಮುಂತಾದ ಮಿತಿಗಳಿದ್ದರೂ ನಗರ ಪ್ರದೇಶಗಳಲ್ಲಿ ಮಾತ್ರ ಸ್ತ್ರೀಯರು ಉದ್ಯೋಗ ನಿರತರಾಗುವ ಪ್ರಮಾಣ 1960ರಿಂದ ಈಚೆಗೆ ಏರುತ್ತಲೇ ಇರುವುದನ್ನು ಕಾಣಬಹುದು.

ಭಾರತದಲ್ಲಿನ ಪ್ರಚಲಿತ ಕುಟುಂಬ ವ್ಯವಸ್ಥೆ ಸಂಪ್ರದಾಯವನ್ನೇ ಬಂಬಲಿಸುವ ಸಂಕುಚಿತ ಮನೋಧರ್ಮಕ್ಕೇ ಪೋಷಣೆ ನೀಡುವಂಥದು. ಕುಟುಂಬವನ್ನು ಕಾಪಾಡಲು ಅಗತ್ಯವಿರುವ ಆರ್ಥಿಕ ವ್ಯವಸ್ಥೆಗೂ ಮನೆ ಜನರ ಭಾವನಾತ್ಮಕ ಸಂಬಂಧಗಳಿಗೂ ಕೊಂಡಿಹಾಕಿರುವಂಥ ಕುಟುಂಬ ತತ್ವ ನಮ್ಮಲ್ಲಿದೆ. ಇತ್ತೀಚಿನ ಇಲ್ಲಿಯ ಮಹಿಳಾ ಅಧ್ಯಯನಗಳು ತೋರಿಸಿರುವಂತೆ ಮಹಿಳೆಯಿಂದ ಪುರಷನು ಪಡೆಯುವ ಅನುಕೂಲಗಳು ಆತ

ಅವಳಿಗೆ ಕೊಡಬಹುದಾದ ಭದ್ರತೆ ರಕ್ಷಣೆಗಳಿಗಿಂತಲೂ ಎಷ್ಟೋ ಪಟ್ಟು ಹೆಚ್ಚಿನದು. ಹಾಗಿದ್ದರೂ ಇಂಥ ಪರಿಸ್ಥಿತಿಯಲ್ಲಿ ಮಹಿಳೆ ತಾನು ನಿಜಕ್ಕೂ ದಮನಗೊಂಡಿದ್ದೇನೆಂದು ಗುರುತಿಸಿಕೊಳ್ಳಲು ಇಚ್ಛಿಸದೆ ಈ ಬಗ್ಗೆ ದ್ವಂದ್ವದಲ್ಲಿ ಉಳಿಯುತ್ತಾಳೆ. ಯಾಕೆಂದರೆ ತನ್ನ ಮಕ್ಕಳ ಬಗೆಗಿನ ಪ್ರೀತಿಗೆ ಆಕೆ ತನ್ನನ್ನು ಬಂಧಿಸಿಟ್ಟು ಕೊಂಡಿರುತ್ತಾಳೆ. ಬಾರೆಟ್ ಮ್ಯಾಕ್ ಇಂಟೋಷ್ ಎಂಬಾಕೆ ಈ ಸ್ಥಿತಿಯನ್ನು Mothering Tyranny ಎಂದು ಕರೆಯುತ್ತಾಳೆ. ಭಾರತೀಯ ಸಂದರ್ಭದಲ್ಲಿ ತನ್ನ ಪತಿಯಿಂದ ಅನುಭವಿಸುವ ದಬ್ಬಾಳಿಕೆಗಿಂತ ಹೆಚ್ಚಿನ ಪ್ರಮಾಣದಲ್ಲಿ ತನ್ನ ಮಕ್ಕಳ ಮೂಲದ ವಿಭಾವನೆಗಳಿಗೆ ಮಹಿಳೆ ಒಳಗಾಗುವುದು ಅಪರೂಪವಲ್ಲ.

ಯಾವುದೇ ಸಂಸ್ಥೆ, ತನ್ನದೇ ಕೆಲವು ಸದಸ್ಯರ ಬಲಿದಾನದ ತಳಹದಿಯ ಮೇಲೆ ತಿರುಗುವುದಾಗಿದ್ದರೆ, ಹೆಚ್ಚು ಜನರಿಗೆ ಕ್ಷೇಮಾಭಿವೃದ್ಧಿ ಸಿಕ್ಕರೆ ಸಾಕೆನ್ನುವ ಉದಾರ ಪ್ರಯೋಜನವಾದಿ ತಾತ್ವಿಕತೆಗೆ ಮಾತ್ರ ಅದು ಪೂರಕವಾಗಿರಬಹುದು. ಆದರೆ ಎಲ್ಲರಿಗೂ ಸಮಾನಸವಲತ್ತು, ಸ್ವಾತಂತ್ರ್ಯ, ನಾಯದ ಹಕ್ಕು ಇರಬೇಕೆನ್ನುವ ಇಂದಿನ ತಾತ್ವಿಕ ಸಂದರ್ಭಕ್ಕೆ ಅದು ಹೊಂದಲಾರದು. ಮಹಿಳಾ ಶೋಷಣೆ ಪಿತೃಪ್ರಧಾನ ಕುಟುಂಬ ವ್ಯವಸ್ಥೆಯ ಒಳನೇಯ್ಗೆಯಲ್ಲೇ ಸೇರಿರುತ್ತದೆ ಎಂಬುದಕ್ಕಾಗಿ ಆ ಶೋಷಣೆಯನ್ನು ಇಲ್ಲವಾಗಿಸಲು ಬೇರೊಂದು ಸಂಸ್ಥೆಯನ್ನು ಅದರ ಜಾಗದಲ್ಲಿ ಅಳವಡಿಸ ಬೇಕೆಂಬುದು ಪರಿಹಾರವಲ್ಲ. ಆದರೆ ಬದುಕಿಗೆ ಕುಟುಂಬವೇ ಅತ್ಯಂತ ಅವಶ್ಯಕವಾಗಿಬಿಟ್ಟ ಜೀವನಶೈಲಿಯಲ್ಲಿ ಸೂಕ್ತ ರೀತಿಯ ಬದಲಾವಣೆಗಳನ್ನು ತಂದು ಕುಟುಂಬದ ಅವಶ್ಯಕತೆಯನ್ನು ಕಡಿಮೆ ಮಾಡಬಹುದಾದರೆ ಅದು ಸರಳವೂ ಸೂಕ್ತವೂ ಆದ ಒಂದು ಪರ್ಯಾಯವಾಗಬಲ್ಲದು ಪಶ್ಚಿಮ ದೇಶಗಳಲ್ಲಿ ವಯಸ್ಸಾದವರು ವೃದ್ಧಾಶ್ರಮಗಳಲ್ಲಿ ಹಣಕೊಟ್ಟು ಗೌರವಯುತವಾಗಿ ಸೇವೆಗಳನ್ನು ಪಡೆದುಕೊಳ್ಳುವ ವ್ಯವಸ್ಥೆ ಇರುವುದು ಇಂತಹ ಒಂದು ಬಗೆಯ ಪರ್ಯಾಯ. ಆದರೆ ಪಶ್ಚಿಮದವರಲ್ಲದ ಜನರಿಗೆ ಇಂಥ ವೃದ್ಧಾಶ್ರಮದ ಪರಿಕಲ್ಪನೆಕೂಡ ಭಯ ಹುಟ್ಟಿಸುತ್ತದೆ. ವೃದ್ಧರ ಸೇವೆ ಹೆಂಗಸರ ಕೆಲಸ, ಕರ್ತವ್ಯದ ಒಂದು ಭಾಗವೆಂದು ನಂಬುವ ಭಾರತೀಯರಿಗೆ, ಹಿರಿಯರನ್ನು ವಾಸ್ತವದಲ್ಲಿ ತಿರಸ್ಕರಿಸುವವರಿಗೆ ಕಡಿಮೆ ಇಲ್ಲದಿದ್ದರೂ ಭಾವನಾತ್ಮಕ ನೆಲೆಯಲ್ಲಿ ಮಾತ್ರ ಅದು ಅನಿಷ್ಟಕರವಾಗಿ ಕಾಣುತ್ತದೆ. ಅವಿವಾಹಿತೆಯರು, ವಿಚ್ಛೇದಿತ ಒಂಟಿ ಮಹಿಳೆಯರು ಗೃಹಸ್ಥ ಕುಟುಂಬಗಳ ಜೊತೆಯಲ್ಲಿ ಪ್ರೀತಿಯಿಂದ ಬದುಕುವ 'extended family' ಪರಿಕಲ್ಪನೆ ಪಶ್ಚಿಮದವರಿಗೆ ತುಂಬ ಉದಾರ ಮಾನವೀಯತೆಯ ಲಕ್ಷಣವಾಗಿ ಕಾಣುತ್ತದೆ. ಅದೇ ಭಾರತೀಯ ಸಮಾಜದಲ್ಲಿ ಕುಟುಂಬದ ಬಂಧುಗಳಲ್ಲದೆ ಊರಿನ ಯಾರೆಲ್ಲರನ್ನೂ ಅಮ್ಮ, ಅಜ್ಜಿ, ಅಕ್ಕ, ಅವ್ವ, ತಂಗಿ, ಅಯ್ಯ, ಅಣ್ಣ, ಅಪ್ಪ ಮುಂತಾಗಿ ಸಂಬಂಧವಾಚಿ ಪದಗಳಿಂದಲೇ ಕರೆದು ಅದೇ ರೀತಿ ನಡೆದುಕೊಳ್ಳುವುದು ಸೌಜನ್ಯದ ಒಂದು ಭಾಗವೆನಿಸುವುದರಿಂದ ಪಶ್ಚಿಮದ 'ವಿಧ್ವತ ಕುಟುಂಬ' ಎಂಬುದು ಇಲ್ಲಿ ಜನಕ್ಕೆ ಬೆರಗುಗೊಳಿಸುವ ಔದಾರ್ಯವೆಂದು ಕಾಣಲಾರದು.

ಕುಟುಂಬದ ಬಗ್ಗೆ ಇಂದಿನ ಮಹಿಳೆಯರು ಬಹುಮಟ್ಟಿಗೆ ಇಟ್ಟುಕೊಳ್ಳುವ ಮೋಹಕಾರಿ ಕಲ್ಪನೆ ಎಂದರೆ ಏಕಪತ್ನಿತ್ವ, ಗೃಹಸ್ಥ ಜೀವನದ ಪಾವಿತ್ರ್ಯ, ಪರಸ್ಪರ ನೈತಿಕವಾಗಿ ಬದ್ಧವಾಗುಳಿಯುವ ದಾಂಪತ್ಯದ ಸಮರಸತ್ವ - ದ ಒಂದು ಭ್ರಾಮಕಲೋಕ, ಮಹಿಳಾ ಚಳವಳಿಗಾರರಲ್ಲೂ ಮನೋವಿಜ್ಞಾನದಿಂದ ಹಿಡಿದು ಸಾಮಾಜಿಕ ಸ್ಥಿರತೆಯ ವರೆಗೆ ಹಲವಾರು ಕಾರಣಗಳನ್ನು ಒಡ್ಡಿ ಈ ಕಿರುಕುಟುಂಬದ ಭ್ರಮೆಯನ್ನು ನೈತಿಕತೆಯ ನೆಲೆಯಲ್ಲಿ ಎತ್ತಿಹಿಡಿಯುವವರಿದ್ದಾರೆ, ಸ್ತ್ರೀವಾದಿಗಳೊಳಗೇ ವಿವಾಹಸಂಸ್ಥೆಯನ್ನು ಒಪ್ಪದವರು ಬ್ರಹ್ಮಚಾರಿಗಳು, ಅವಿವಾಹಿತೆಯರು ಸಲಿಂಗರತಿವಾದಿಗಳು, ದ್ವಿಲಿಂಗಾತ್ಮಕ ಲೈಂಗಿಕತೆಯನ್ನು ಮೆಚ್ಚುವವರು ನಪುಂಸಕತ್ವದಿಂದ ಕೊರತೆ ಅನುಭವಿಸುವವರು, ಲೆಸ್ಬಿಯನ್ನರು ಮುಂತಾದ ಅನೇಕ ಲೈಂಗಿಕಸ್ಥಿತಿಗಳಲ್ಲಿ ಬದುಕುವ ಜನರು ಕಾಣಸಿಗುತ್ತಾರೆ. ಅಂಥವರೆಲ್ಲರ ಹಿತಾಸಕ್ತಿಗೆ ಪುರುಷಕೇಂದ್ರಿತ ಕುಟುಂಬ ನಿಜವಾಗಿ ಯಾವ ಪರಿಹಾರವೂ ಅಲ್ಲ. ಹಾಗಿದ್ದರೂ ಅವರೆಲ್ಲರಿಗೂ ವಿರುದ್ಧವಾಗಿ ಬೆಟ್ಟಿಫ್ರೀಡನ್ ರಂಥ ಸ್ತ್ರೀವಾದಿಗಳು ಗೃಹಸ್ಥಜೀವನದ ಪಾವಿತ್ರ್ಯಯವನ್ನು ಕೊಂಡಾಡುತ್ತಾರೆ.

'ಕುಟುಂಬದಲ್ಲಿ ಅಂತರ್ಗತವಾಗಿರುವ ಮಹಿಳಾ ಶೋಷಣೆ' ಎಂದು ಏಕಪಕ್ಷೀಯವಾಗಿ ನೋಡುವ ಬದಲಾಗಿ ಸ್ತ್ರೀ-ಪುರುಷರು ಭಿನ್ನಲಿಂಗಗಳಾಗಿಯೇ ಸೃಷ್ಟಿಗೊಂಡು, ಸಾಂಸ್ಕೃತಿಕ ಪ್ರಕ್ರಿಯೆಗಳಲ್ಲಿ ಭಿನ್ನರೀತಿಯ ಪಾತ್ರಗಳನ್ನೇ ನಿರ್ವಹಿಸುತ್ತಾ ಬಂದಿರುತ್ತಾರೆಂಬ ವಾಸ್ತವವನ್ನು ಗಮನಕ್ಕೆ ತೆಗೆದುಕೊಂಡಾಗ ಮಾತ್ರ ಸಾಂಸ್ಕೃತಿಕವಾಗಿ ಅಂತರ್ಗತವಾಗಿ ಹೋಗಿರುವ ಸ್ತ್ರೀ ಶೋಷಣೆಯ ಸ್ವರೂಪಗಳನ್ನು ಅರ್ಥಮಾಡಿಕೊಳ್ಳಲು ಸಾಧ್ಯ. ಲಿಂಗಾಧಾರಿತ ಶೋಷಣೆಯನ್ನು ಕುರಿತಂತೆ Carole.s. vance ಎಂಬಾಕೆ ಕೇಳುವ ಕೆಲವು ಪ್ರಶ್ನೆಗಳು ಗಮನಿಸಬೇಕಾದ ಪ್ರಶ್ನೆಗಳು.

1 ಸ್ತ್ರೀ ಪುರುಷರು ಮೂಲಭೂತವಾದ ವ್ಯತ್ಯಾಸಗಳುಳ್ಳ ಲಿಂಗಸ್ವಭಾವಗಳೆ ಅಥವಾ ನಿರ್ದಿಷ್ಟ ಚಾರಿತ್ರಿಕ, ಸಾಂಸ್ಕೃತಿಕ ಸ್ಥಿತಿಗಳ ಉತ್ಪನ್ನಗಳೆ ?

2 ಪುರುಷಪ್ರಾಧಾನ್ಯದಡಿಯ ದಮನದ ಕಾರಣವಾಗಿ ಸ್ತ್ರೀಯ ಲೈಂಗಿಕತೆ, ಏನಾದರೂ ಮೊಟಕಾಗಿದೆಯೇ ಅಥವಾ ಪುರುಷರದಕ್ಕಿಂತ ಪೂರ್ತಿಯಾಗಿ ಭಿನ್ನವೇ ಆಗಿದೆಯೇ ?

3. ಪುರುಷರಲ್ಲಿ ಅಂತರ್ಗತ ಲಕ್ಷಣವಾಗಿ ತೋರುವ ಆಕ್ರಮಣ ಶೀಲತೆ, ಹಿಂಸಾತ್ಮಕತೆಗಳಂಥ ಸ್ವಭಾವಗಳಿಂದಲೇ ಮಹಿಳೆಯರು ಲೈಂಗಿಕವಾಗಿ ಅಪಾಯವನ್ನು ಎದುರಿಸುತ್ತಾರೆಯೆ ಅಥವಾ ಪಿತೃಪ್ರಾಧಾನ್ಯದಲ್ಲಿನ ಸಾಂಸ್ಕೃತಿಕ ಒತ್ತಡಗಳ ಫಲವಾಗಿ ಪುರುಷರು ಆಕ್ರಮಣಶೀಲರಾಗಿಯೂ, ಸ್ತ್ರೀಯರು ವಿಧೇಯರಾಗಿಯೂ ತಮ್ಮತಮ್ಮ ಲೈಂಗಿಕತೆಗಳಿಗೆ ಅಭಿವ್ಯಕ್ತಿ ನೀಡುತ್ತಾರೆಯೆ ?

4 ಲೈಂಗಿಕನೆಲೆಯಲ್ಲಿನ ಪುರುಷರ ಹಿಂಸಾಚರಣೆಗಳನ್ನು ಕುಗ್ಗಿಸಲು / ನಿವಾರಿಸಲು ಬರುತ್ತದೆಯೆ ?

5 ಹೆಣ್ಣಿನ ಸಂತಾನೋತ್ಪಾದಕ ಜೈವಿಕ ಲಕ್ಷಣಗಳು ಆಕೆಯ ಲೈಂಗಿಕಾನುಭವದೊಳಗೆ ಹೇಗೆ ಪ್ರವೇಶಿಸುತ್ತವೆ ?

6 ಸ್ತ್ರೀವಾದವು ಸ್ತ್ರೀಯರ ಲೈಂಗಿಕ ವ್ಯತ್ಯಾಸಗಳ ಹೆಚ್ಚುಗಾರಿಕೆಯನ್ನು ಸಾಧಿಸಲಿಕ್ಕೋ ಅಥವಾ ಅವುಗಳ ಪ್ರಾಮುಖ್ಯವನ್ನು ಕುಗ್ಗಿಸಿ ತೋರಿಸಲಿಕ್ಕೋ ಯತ್ನಿಸಬೇಕೆ?

ಮಹಿಳೆಯರ ವೈಯಕ್ತಿಕ ಅನುಭವದ ನೆಲೆಗಳು, ಅವರ ಆನಂದಾಭಿವ್ಯಕ್ತಿಯ ಕ್ಷೇತ್ರಗಳನ್ನೇ ಸಿದ್ಧಾಂತೀಕರಿಸುವುದಕ್ಕೆ ಉದ್ದೇಶಪೂರ್ವಕವಾಗಿ ಅವುಗಳನ್ನು ವೈಚಾರಿಕವಾಗಿಸುವುದಕ್ಕೆ ಕಷ್ಟಪಟ್ಟು ಆಕೆ ಹೀಗೆ ಯತ್ನಿಸಿದ್ದಾರೆ. ಆದರೆ ತಾತ್ವಿಕತೆ ಸ್ವಾಯತ್ತವಾದುದಲ್ಲ, ಅದು ಮಾನವರ ಪ್ರಯತ್ನ, ಕ್ರಿಯೆಗಳೊಂದಿಗೆ ಸಂಬಂಧ ಪಡೆದಿರುತ್ತದೆ. ಸಿದ್ಧಮಾದರಿಗಳು ಪರಿಹಾರೋಪಾಯಗಳು, ಪುನಾರಚನೆಗಳ ಮುಖಾಂತರ ಜೆಂಡರ್‌ನ ತಾತ್ವಿಕತೆ ಸಾಂಸ್ಕೃತಿಕವಾಗಿ ಮತ್ತೆ ಮತ್ತೆ ಉತ್ಪಾದನೆಗೊಳ್ಳುತ್ತಿರುತ್ತದೆ ಎಂದು ಮಿಷೆಲ್ ಬ್ಯಾರಟ್ಸ್ ಪ್ರತಿಪಾದಿಸಿದ ವಿಚಾರ ಬಂಡವಾಳಶಾಹಿ ಹುಟ್ಟುವ ಮೊದಲೇ ಅದರ ಪೂರ್ವಭಾವಿ ಅವಶ್ಯಕತೆಗಾಗಿ ಮಹಿಳಾ ಶೋಷಣೆ ಹುಟ್ಟಲಿಲ್ಲ. ಬಂಡವಾಳಶಾಹಿ ರಾಜಕೀಯದ ಅವಶ್ಯಕತೆಗೆ ಸ್ತ್ರೀ ಪುರುಷ ದುಡಿಮೆಗಳನ್ನು ಭಿನ್ನರೀತಿಗಳಿಂದ ವಿಭಜಿಸಲಾಗಿದ್ದರೂ, ಇಂಥ ವ್ಯವಸ್ಥೆಯ ಒಳಗಿದ್ದೂ ವಿಮೋಚನೆಗೆ ಯತ್ನಿಸಲೂ ಸಾಧ್ಯ ಎನ್ನುವುದು ತಾತ್ವಿಕವಾಗಿ ಅಸಾಧ್ಯವಲ್ಲ. ದುಡಿಮೆ, ಶಿಶುಸಂಗೋಪನೆಗಳನ್ನು ಮರು ಹಂಚಿಕೆ ಮಾಡುವುದು, ಪುರುಷರ ಗಳಿಕೆಯನ್ನೇ ಮಹಿಳೆ ಅವಲಂಬಿಸಿರುವ ವಾಸ್ತವ ಹಾಗೂ ಕಾಲ್ಪನಿಕ ನಂಬಿಕೆಗಳನ್ನು ಕೊನೆಗೊಳಿಸುವುದು ಮುಖ್ಯ. ಆದರೆ ಇಂತಹ ಬದಲಾವಣೆಗಳು ಕಾರ್ಯಗತವಾಗುವುದೇ ನಿಜವಾಗಿ ಕಷ್ಟದ ಸಂಗತಿ. ಏಕೆಂದರೆ ಬಂಡವಾಳ ಶಾಹಿ ಸಾಮಾಜಿಕ ವ್ಯವಸ್ಥೆಯ ಸಂರಚನೆಯಲ್ಲೇ ಇಂಥ ವಿಭಜನೆಗಳೂ ತಳವೂರಿದ್ದು ಅಂಥ ಸಮಾಜದ ರಾಜಕೀಯ ಹಾಗೂ ತಾತ್ವಿಕ ಸ್ಥಿರತೆಯಲ್ಲಿ ಇವು ಮುಖ್ಯಪಾತ್ರ ವಹಿಸುತ್ತಿರುತ್ತವೆ. ಸ್ತ್ರೀ-ಪುರುಷ 'ವ್ಯಕ್ತಿತ್ವ' ಹೇಗಿರಬೇಕೆಂಬ ನಮ್ಮ ಗ್ರಹಿಕೆಗಳನ್ನೂ ಅವುರೂಪಿಸುತ್ತವೆ. ದುಡಿಮೆ-ಕೂಲಿಯ ವ್ಯವಸ್ಥೆಯ ಮೂಲಭೂತ ಸಂಬಂಧಗಳು ಗೃಹಸ್ಥಜೀವನದ ಒಳನೇಯ್ಗೆಯಾಗಿರುವುದರಿಂದ ಬಂಡವಾಳಶಾಹಿಯ ಉತ್ಪಾದನೆ-ಮರು ಉತ್ಪಾದನೆಯ ಸಂಬಂಧಗಳನ್ನು ಹಿಂಡಿ ಸ್ತ್ರೀ ವ್ಯಕ್ತಿತ್ವದ ಲಿಂಗಭೇದಾತೀತ ಮಾದರಿಯೊಂದನ್ನು ಹೊರತೆಗೆಯಬಹುದು ಎಂಬುದು ಅಸಾಧ್ಯ. ಅದು ಸಾಧ್ಯವಾಗಲಿಕ್ಕೆ ಅಂಥ ಎಲ್ಲಾ ಸಂಬಂಧಗಳುಳ್ಳ ವ್ಯವಸ್ಥೆಯೇ ಆಮೂಲಾಗ್ರವಾಗಿಬದಲಾದಬೇಕಾಗುತ್ತದೆ. ಅಂದರೆ ಸಮಾಜವಾದವಿಲ್ಲದಿದ್ದರೆ ಮಹಿಳಾ ವಿಮೋಚನೆ ಸಾಧ್ಯವಾಗುವುದಿಲ್ಲ. ಹಾಗೆಯೇ ಮಹಿಳಾವಿಮೋಚನೆ ಇಲ್ಲದೆಯೇ ಸಮಾಜವಾದವೂ ಇಲ್ಲ-ಇದು ಕೇವಲ ಶುದ್ಧ ಆಶಾವಾದವಲ್ಲ. ಅದಕ್ಕಿಂತ ಹೆಚ್ಚಿನ ಅರ್ಥವ್ಯಾಪ್ತಿ ಇದಕ್ಕಿದೆ. ಆದರೂ ಸ್ತ್ರೀ-ಪುರುಷ ದುಡಿಮೆಗಳ ನಡುವಿನ ಅಂತರಗಳು, ಅವರ ದುಡಿಮೆಗಾರಿಕೆಯ ಅಂತರಗಳು ಎಷ್ಟು ಹಿರಿದಾಗಿವೆ ಎಂಬುದನ್ನು ನೋಡುವಾಗ ಜೆಂಡರ್ ಸಮಸ್ಯೆಗೆ ಸ್ಪಂದಿಸಲಾರದಂಥ ಯಾವುದೇ ಸಂಕುಚಿತ ಸಮಾಜವಾದದ ಪ್ರಣಾಳಿಕೆಯೊಳಗೆ ಸ್ತ್ರೀವಾದವನ್ನು ತುರುಕುವುದೂ ಅಸಾಧ್ಯ. ವೈಯಕ್ತಿಕ ಹಾಗೂ ಸಾಮೂಹಿಕ ಮಾನವ ಕ್ರಿಯೆ ಹೇಗೆ ಚರಿತ್ರೆಯ ಸೃಷ್ಟಿಶೀಲ ಪ್ರಕ್ರಿಯೆಗೆ ವೈಚಾರಿಕ ಆಯಾಮವನ್ನು ಒದಗಿಸುವ ಜಾಗ ಆಗಿರಬಲ್ಲದು ಎಂಬುದನ್ನು ಗಮನಿಸಬೇಕು. ಈ ವಿಷಯವನ್ನು ಗುರುತಿಸದ ಯಾವುದೇ ತಾತ್ವಿಕತೆಯ ಚರ್ಚೆ ಏನೋ ರಹಸ್ಯಾತ್ಮಕ, ಸ್ವಾಯತ್ತ ಶಕ್ತಿ ಎಂಬಂತೆಯೂ, ಜನರೆಲ್ಲ ಸುಮ್ಮನೆ ಜಡವಾಗಿ ಆ ಸಿದ್ಧಾಂತಕ್ಕೆ ತಮ್ಮನ್ನು ಒಡ್ಡಿಕೊಳ್ಳುವರೆಂದೂ ಹೇಳುವ ಅತಿರೇಕಕ್ಕೆ ಎಡೆಗೊಡಬಹುದು.

ವ್ಯಕ್ತಿಗಳ / ಸಮೂಹಗಳ ಮೂಲಕ ನಡೆಸಲಾಗುವ ಕ್ರಿಯೆ, ಹೇಗೆ ಒಂದು ತಾತ್ವಿಕ ಚರ್ಚೆಗಿಂತ ಹೆಚ್ಚಾದ ಬದಲಾವಣೆಗಳನ್ನು ನಿಜವಾಗಿ ಉಂಟುಮಾಡಬಹುದು ಎಂಬುದಕ್ಕೆ ಭಾರತದಲ್ಲಿ ಮಹಿಳಾ ಚಳುವಳಿಯು ಕೆಲಸಮಾಡುತ್ತಿರುವ ರೀತಿಯೇ ನಿದರ್ಶನಗಳನ್ನು ಒದಗಿಸಬಲ್ಲದು. 1978ರಲ್ಲಿ ಮಥುರಾ ಎಂಬ ಬುಡಕಟ್ಟು ಜನಾಂಗದ ಅಪ್ರಾಪ್ತ ವಯಸ್ಸಿನ ಹುಡುಗಿ ಪೋಲಿಸರ ಅತ್ಯಾಚಾರಕ್ಕೆ ಬಲಿಯಾದ ಸಂದರ್ಭದಲ್ಲಿ ದೇಶವಿಡೀ ಮಹಿಳೆಯರು ಸಂಘಟಿತರಾಗಿ ಆ ಅತ್ಯಾಚಾರದ ವಿರುದ್ಧವಾಗಿ ಬಲವಾದ ಪ್ರತಿಭಟನೆ ಪಡೆಸಿದರು. ಅದರಿಂದಾಗಿ ಸೆಷನ್

ಕೋರ್ಟ್ ಮಥುರಾಳೇ ಅನೈತಿಕವ್ಯಕ್ತಿ ಎಂದು ತೀರ್ಪಿತ್ತದ್ದನ್ನು ಪ್ರಶ್ನಿಸಿದ ಹೈ ಕೋರ್ಟು, ಇಬ್ಬರು ಪೋಲೀಸರಿಗೆ ತಲಾ 71/2 ವರ್ಷಗಳ ಕಠಿಣ ಸಜೆಯನ್ನು ವಿಧಿಸಿತು. ಆದರೆ ಅಪರಾಧಿಗಳು ಸುಪ್ರೀಂ ಕೋರ್ಟಿಗೆ ಹೋದಾಗ, ಅದು ಹೈಕೋರ್ಟಿನ ತೀರ್ಪಿಗೆ ವಿರುದ್ಧವಾಗಿ ಮಥುರಾಳ ಸಹಕಾರದಿಂದಲೇ ಅದೆಲ್ಲ ಸಂಭವಿಸಿದ್ದೆಂದು ತೀರ್ಮಾನಿಸಿತು. ಈ ತೀರ್ಪನ್ನು ಖಂಡಿಸಿ ಮಹಿಳಾ ಸಂಘಟನೆಗಳೆಲ್ಲ ಒಟ್ಟಾಗಿ ದೇಶದ ಅತ್ಯಾಚಾರವಿರೋಧಿ ಕಾನೂನನ್ನೇಬದಲಾಯಿಸ ಬೇಕೆಂದು ಬಲವಾದ ಪ್ರತಿಭಟನೆ ನಡೆಸಿ, ಒತ್ತಾಯ ತಂದಿದ್ದರ ಫಲವಾಗಿ 1980 ರಲ್ಲಿ ಮೇಲಧಿಕಾರಿಯ ರಕ್ಷಣೆಯ ವಲಯದೊಳಗೆ ಅತ್ಯಾಚಾರ ನಡೆದಂಥ ಸಂದರ್ಭಗಳಲ್ಲಿ ಅನ್ವಯಿಕವಾದ ಕಾನೂನಿನಲ್ಲಿ ಕೆಲವು ತಿದ್ದು ಪಡಿಗಳನ್ನು ಲಾ ಕಮಿಷನ್ನು ಸೂಚಿಸಿತು. ಬಲಿಪಶುವಾದ ಹೆಣ್ಣಿ ಐಡಂಟಿಟಿಯನ್ನು ಕೋರ್ಟಿನ ವಿಚಾರಣೆಯ ಸಂದರ್ಭದಲ್ಲಿ ಹೊರಹಾಕಬಾರದು, ವೈವಾಹಿಕ ಜೀವನದೊಳಗಿನ ಅತ್ಯಾಚಾರದ ಸಂದರ್ಭದಲ್ಲಿ ಪತ್ನಿ 15 ವರ್ಷಕ್ಕಿಂತ ಚಿಕ್ಕವಳಾಗಿದ್ದಾಗ, ಅದನ್ನೂ ಅತ್ಯಾಚಾರದ ಅಪರಾಧವೆಂದೇ ಪರಿಗಣಿಸಬೇಕು; ತಪ್ಪಿತಸ್ಥರಲ್ಲವೆಂದು ಸಾಕ್ಷ್ಯಾಧಾರಗಳನ್ನು ತಾವೇ ಒದಗಿಸಿ ನಿರೂಪಿಸುವ ಜವಾಬ್ದಾರಿ ಆಪಾದಿತ ಮೇಲಧಿಕಾರಿಗಳದಾಗಿರಬೇಕು, ಎಂಬ ಕೆಲವು ಸುಧಾರಣೆಗಳು ಅತ್ಯಾಚಾರವಿರೋಧಿ ಕಾನೂನಿಗೆ ಇಂದು ಅನ್ವಯವಾಗುತ್ತಿದ್ದರೆ, ಅದು ಮಹಿಳಾ ಚಳವಳಿಯ ಪ್ರಯತ್ನದಿಂದಲೇ.

ಭಾರತೀಯ ಸಮಾಜದ ಸಾಂಪ್ರದಾಯಿಕತೆ ಎಲ್ಲಾ ಬಗೆಯ ಸಾಮಾಜಿಕ ಬದಲಾವಣೆಗಳಿಗೆ ತೀವ್ರವಾಗಿ ವಿರೋಧವನ್ನು ಒಡ್ಡುತ್ತಲೇ ಇರುವಂಥದು. ಆದ್ದರಿಂದ ಬದಲಾವಣೆಗಾಗಿ ನಡೆಸುವ ಹೋರಾಟಗಳು ಕಡಿದಾದ ಬೆಟ್ಟವೇರುವಂಥ ಕಷ್ಟದ ಸಾಹಸಗಳೇ. ಹಾಗಿದ್ದರೂ ಮದುವೆ ವ್ಯವಸ್ಥೆ, ವಿಚ್ಛೇದನೆ, ವೇಶ್ಯಾಗಾರಿಕೆ, ಮಕ್ಕಳ ಪೋಷಕತ್ವದ ಹಕ್ಕು ಮುಂತಾದ ಸಮಸ್ಯೆಗಳನ್ನು ಎತ್ತಿಕೊಂಡು ಮಹಿಳಾ ಚಳವಳಿಗಾರರು ತಮ್ಮ ಹೋರಾಟವನ್ನು ಬಿಡದೆ ಮುಂದುವರೆಸಿದ್ದಾರೆ. ವರದಕ್ಷಿಣೆ ವಿರುದ್ಧವಾದ ಚಳವಳಿ ದೇಶದ ಉದ್ದಗಲಕ್ಕೂ ಹರಡಿತ್ತು. ಬಡಿತಕ್ಕೆ ಒಳಗಾಗುವ, ಮನೆಯಿಂದ ಓಡಿಸಲ್ಪಟ್ಟ ಸ್ತ್ರೀಯರಿಗೆ ತಾತ್ಕಾಲಿಕ ವಸತಿ, ಪುಕ್ಕಟೆ ಕಾನೂನು ನೆರವುಗಳನ್ನು ಕೆಲವು ಮಹಿಳಾ ಸಂಘಟನೆಗಳು ಒದಗಿಸುತ್ತಾ ಬಂದಿವೆ. ಮಾಧ್ಯಮಗಳ ಮೂಲಕ ಪ್ರಸಾರವಾಗುವ ಮಹಿಳೆಯರಿಗೆ ಅವಮಾನ, ಹೀನಾಯ ಉಂಟುಮಾಡುವಂಥ ವಿಷಯಗಳ ವಿರುದ್ಧವಾಗಿ ಸಾಕಷ್ಟು ಪ್ರತಿಭಟನೆ ನಡೆದಿದೆ. ಅನಾರೋಗ್ಯಕರ ಗರ್ಭಪಾತ, ಯೋನಿ ಪರೀಕ್ಷೆ, ಸ್ತ್ರೀ ಭ್ರೂಣಹತ್ಯೆ, ಅಪರೀಕ್ಷಿತ ಜನನ ನಿಯಂತ್ರಣ ಸಾಧನಗಳನ್ನು ಸ್ತ್ರೀಯರ ಮೇಲೆ ಪ್ರಯೋಗಿಸುವ ಹುನ್ನಾರ , ಮನೆಗೆಲಸದ ಹೆಂಗಸರ ಸಮಸ್ಯೆಗಳನ್ನು ಕೈಗೆತ್ತಿಕೊಂಡು ಹೋರಾಟಗಳು ನಡೆಯುತ್ತಲೇ ಇರುವುದನ್ನು ಕಾಣಬಹುದು.

ಮೂಢನಂಬಿಕೆ, ಮಾಟಗಾತಿಯರ ಬೇಟೆ, ಕಾಡುಗಳ ನಿರ್ನಾಮ, ಅಸ್ಪೃಶ್ಯರು ಹಾಗೂ ಬುಡಕಟ್ಟು ಜನರ ಶೋಷಣೆ ಮುಂತಾದವುಗಳೂ ಮಹಿಳಾ ಚಳವಳಿಯ ಹೋರಾಟಕ್ಕೆ ಕೇಂದ್ರವಾಗಿವೆ. ದೇಶದ ಹಲವೆಡೆ ವಿಶ್ವವಿದ್ಯಾಲಯಗಳಲ್ಲಿ ಮಹಿಳಾ ಅಧ್ಯಯನ ವಿಭಾಗಗಳೂ, ಕೆಲವು ಮಹಿಳಾ ವಿಶ್ವವಿದ್ಯಾಲಯಗಳೂ ಸ್ಥಾಪನೆಗೊಂಡಿರುವುದು ಮಹಿಳೆಯರದೇ ಪ್ರಕಾಶನ ಸಂಸ್ಥೆಗಳು ಹುಟ್ಟಿಕೊಳ್ಳುತ್ತಿರುವುದು, ಮುಂತಾದ ವಿದ್ಯಮಾನಗಳು 80 ರಿಂದ ಈಚೆಗೆ ಮಹಿಳಾ ಚಳವಳಿ ಬೆಳೆದುಬಂದಿರುವುದಕ್ಕೆ ನಿದರ್ಶನಗಳು. ಸಾಮಾಜಿಕ ಪರಿವರ್ತನೆಯ ಗುರಿಯಿಟ್ಟುಕೊಂಡು ಮಹಿಳಾ ಚಳವಳಿಗಾರರು ನಿಷ್ಠೆಯಿಂದ ಈ ಹೋರಾಟಗಳಲ್ಲಿ ಭಾಗವಹಿಸುತ್ತಿರುವ ರೀತಿಯು ಭರವಸೆದಾಯಕ ಎನಿಸಿದರೂ ಮಹಿಳೆಯರ ಹೋರಾಟದ ವಾಸ್ತವ ಲಕ್ಷಣಗಳು ಆದರ್ಶದಕನಸುಗಾರಿಕೆಗೆ ದೂರವೇ. ನಗರಗಳಿಗೆ ಸೀಮಿತವಾದ ಮಧ್ಯಮವರ್ಗೀಯ ಲಕ್ಷಣವುಳ್ಳ ಬಹಳಷ್ಟು ಮಹಿಳಾ ಸಂಘಟನೆಗಳಿಗೆ ಗ್ರಾಮೀಣ ಮಹಿಳೆಯರ ಅಥವಾ ಅಲ್ಪಸಂಖ್ಯಾತ ಮಹಿಳೆಯರ ಸಮಸ್ಯೆಗಳನ್ನು ಸ್ಪರ್ಶಿಸುವುದು ಸಾಧ್ಯವಾಗಿಲ್ಲ. ಮಹಿಳಾ ಚಳವಳಿಗಾರರು ಹಮ್ಮಿಕೊಳ್ಳುವ ಪ್ರಗತಿಪರ ಕಾರ್ಯಕ್ರಮಗಳೆಲ್ಲವನ್ನೂ ಆಳುವ ಸರ್ಕಾರಗಳೇ ತಮ್ಮ ಕಾರ್ಯಯೋಜನೆಗೆ ಅನಾಮತ್ತಾಗಿ ಅಳವಡಿಸಿಕೊಳ್ಳು-ವುದರಿಂದ ಮಹಿಳಾ ಚಳವಳಿ ದಿಕ್ಕುಗೆಡುವಂತಾದುದು ಇದೆ. ಗ್ರಾಮಪಂಚಾಯ್ತಿ, ಅಂಗನವಾಡಿ, ಮಹಿಳಾ ಮತ್ತು ಮಕ್ಕಳ ಕ್ಷೇಮಾಭಿವೃದ್ಧಿ ಯೋಜನೆಗಳೊಳಗೆ ಮಹಿಳಾ ಪ್ರಗತಿಯ ಉದ್ದೇಶಿತ ಕಾರ್ಯಗಳು ಸೇರಿಹೋದಾಗ ಮಹಿಳೆಯರ ಸರ್ಕಾರೇತರ ಸಂಘಟನೆಗಳೂ ತಮ್ಮ ಕಾರ್ಯತಂತ್ರಗಳನ್ನು ಬದಲಿಸಿಕೊಳ್ಳಬೇಕಾಯ್ತು. ಅವರು ತಮ್ಮನ್ನು ಫಲಾಪೇಕ್ಷಿಗಳಾದ ಸಾಮಾನ್ಯ ಗ್ರಾಮೀಣ ನಿರಕ್ಷರಸ್ತ ಮಹಿಳೆಯರಿಗೂ ಸರ್ಕಾರಕ್ಕು ನಡುವೆ ಪ್ರವೇಶಿಸಿ, ಸರ್ಕಾರದ ಯೋಜನೆಗಳ ನಿಜವಾದ ಫಲವು ಅವಶ್ಯಕತೆ ಇರುವ ಜನತೆಗೇ ತಲುಪುವಂತೆ ಮಾಡುವ ಧ್ಯೇಯವಾದಿ ಏಜೆಂಟರಾಗಿ ತಮ್ಮನ್ನು ತೊಡಗಿಸಿಕೊಳ್ಳತೊಡಗಿದರು.

ಇದರಿಂದಾಗಿ ಬೇರಿನ ನೆಲೆಯವರೆಗೂ ಮಹಿಳಾ ಚಳವಳಿಯನ್ನು ಕೊಂಡೊಯ್ಯುವ ಮತ್ತು ಸಮಗ್ರ ಲಿಂಗಾಧಾರಿತ ಶೋಷಣೆಯ ವಿರುದ್ಧ ಜನಜಾಗೃತಿ ಉಂಟುಮಾಡುವ ದೀರ್ಘಾವಧಿ ಹೋರಾಟದ ಯತ್ನಗಳು ನಡೆಯತೊಡಗಿದವು.

ಅಂತಾರಾಷ್ಟ್ರೀಯ ಮಹಿಳಾ ಚಳವಳಿ ತೆಗೆದುಕೊಂಡ ನಿರ್ಧಾರಗಳು, ಇಟ್ಟ ಹೆಜ್ಜೆಗಳು ಸದಾಕಾಲವು ಸಮರ್ಪಕವಾಗಿಯೇ ಇದೆ ಎಂದೇನೂ ಅಲ್ಲ. ಅಥವಾ ಮಹಿಳಾ ಸಂಘಟನೆಗಳಯ ಪ್ರೋತ್ಸಾಹಿಸಿದ ಕಾರ್ಯಕ್ರಮಗಳು ಎಲ್ಲವೂ ಯಾವಾಗಲೂ ವ್ಯಕ್ತಿ ವ್ಯಕ್ತಿಗಳ ನಡುವಿನ ಕಂದರವನ್ನು ನಿರ್ವಹಿಸಬಲ್ಲಸಂವಹನಾ ಶಕ್ತಿಯುಳ್ಳ ಆದರ್ಶಪ್ರಾಯ ಕ್ರಿಯೆಗಳೇ ಆಗಿವೆ ಎಂದು ಹೇಳಬರುವಂತಿಲ್ಲ. ವೈಚಾರಿಕತೆಯು ವ್ಯಕ್ತಿನಿಷ್ಠೆಯ ಲಕ್ಷಣಗಳನ್ನು ಬೆಳೆಸಿಕೊಳ್ಳುವುದು, ಸೌಂದರ್ಯಪ್ರಜ್ಞೆಯನ್ನು ತೋರಿಸಲೆತ್ನಿಸುವ ಅವೈಚಾರಿಕ ಆಯಾಮಗಳತ್ತ ದಿಢೀರ್ ಆಸಕ್ತಿಗಳು, ಚಳವಳಿಯತ್ತ ನೈತಿಕ ಬದ್ಧತೆಯ ಅಭಾವ ಮುಂತಾದವು ಭಾರತೀಯ ಮಹಿಳಾ ಚಳವಳಿಯು ಶಿಥಿಲಗೊಳ್ಳುವಂತೆ ಮಾಡಿವೆ. ಯಾವುದೇ ಚಳವಳಿ, ಕಾರ್ಯಚರಣೆ, ಚರ್ಚೆಗಳು ನೈತಿಕ ಸಮಸ್ಯೆಗಳನ್ನು ಬಿಕ್ಕಟ್ಟುಗಳನ್ನು ಎದುರಿಸುವ ಸ್ಥಿತಿಯೇ ವರ್ತಮಾನದಲ್ಲಿದೆ. ಸಮಾನ ಸಿವಿಲ್‌ಕೋಡ್‌ಗಾಗಿ, ಪಾರ್ಲಿಮೆಂಟಿನಲ್ಲಿ 33% ಮೀಸಲಾತಿಗಾಗಿ ನಡೆದಿರುವ ಮಹಿಳೆಯರ ಹಕ್ಕೊತ್ತಾಯದ ಯತ್ನಗಳು ಅಸಫಲವಾಗುವಲ್ಲಿ - ಚಳವಳಿಗಾರರಲ್ಲೇ ಇರುವಂಥ ಭಿನ್ನಮತದ ಒಲವುಗಳು ಎಷ್ಟು ಬಲಿಷ್ಟ ಎಂಬುದೂ ಒಂದು ಮುಖ್ಯ ಕಾರಣವಾಗಿದೆ. ಕ್ರಾಂತಿಯ ಉದ್ದೇಶದಿಂದ ಹೊರಟ ಸಮೂಹಗಳೊಳಗೆ ಪ್ರಬಲವಾದ ನೈತಿಕ ಪರಿಗ್ರಹಿಕೆಗಳು ಮುಂಚೂಣಿಗೆ ಬಂದಾಗ ಮಾತ್ರ ಎಲ್ಲರಿಗೂ ತಲುಪಬಲ್ಲಂಥ ಕಾರ್ಯಾಚರಣೆಗಳು ಕಾಣಸಿಕೊಳ್ಳುತ್ತವೆ. ವ್ಯಕ್ತಿಗಳ ಸ್ವವಿಶಿಷ್ಟತಾವಾದಗಳಿಂದ ಎಥಿಕ್ಸ್ ಎಂಬುದು ಬೇರ್ಪಡಬಾರದೆಂಬ ಕಠೋರ ಸತ್ಯವನ್ನು ಇಂದು ಭಾರತದಲ್ಲಿನ ಎಲ್ಲಾ ಸಮೂಹ ಚಳವಳಿಗಳೂ ಎದುರಿಸುತ್ತಿವೆ. ಮಾನವ ಕ್ರಿಯೆಯೂ ಮೌಲಿಕತೆಯ ಪ್ರಶ್ನೆಯೊಂದಿಗೆ ಜೋಡಿಸಿಕೊಂಡಿರುವುದರಿಂದ, ಹಿಂದಿನ ತಪ್ಪುಗಳಿಂದ ಪಾಠ ಕಲಿತು ಮುಂದೆ ಸಾಗುವುದೇ ಮಹಿಳಾ ಚಳವಳಿಯು ಉಳಿಯಲು ಇರುವದಾರಿ.

ಪ್ರಸ್ತುತ ಲೇಖನಕ್ಕೆ ಡಾ॥ನಳಿನಿ ರಾಜನ್ ಅವರ 'Womens Movement : hidden agendas' ಎಂಬ ಲೇಖನದ ಮುಖ್ಯ ವಿಚಾರಗಳನ್ನು ಬಳಸಿಕೊಂಡಿದೆ. ಮೂಲ"

WITHIN THE FRAGMENTS :

A Non-Holistic approach to Indian Culture by Nalini Rajan, Affiliated East-West press pvt.ltd. New Delhi, 1990

# ಬದುಕಿನ ಕೇರಿಯಲ್ಲಿ ಒಂದು ಸುತ್ತು...

ಬದುಕು (ಕಾದಂಬರಿ)
ಗೀತಾ ನಾಗಭೂಷಣ
ಪ್ರ: ಲೋಹಿಯಾ ಪ್ರಕಾಶನ, ಬಳ್ಳಾರಿ
ಪುಟಗಳು : 489
ಬೆಲೆ : ರೂ. 190/-

ಕನ್ನಡ ಮಹಿಳಾ ಕಾದಂಬರಿ ಲೋಕದಲ್ಲಿ ಓದುಗರ ಹುಬ್ಬೇರಿಸುವಂತೆ ಮಾಡಿರುವ ಹೆಸರು ಗೀತಾನಾಗಭೂಷಣ ಅವರದು. ಈಗಾಗಲೇ ಇವರ ಕೃತಿಗಳು ವಾರಪತ್ರಿಕೆಗಳಲ್ಲಿ ಧಾರಾವಾಹಿಗಳಾಗಿ, ಆಕಾಶವಾಣಿ, ಕಿರುತೆರೆ, ಚಲನಚಿತ್ರಗಳಾಗಿ ಪ್ರಸಿದ್ಧಿ ಪಡೆದಿವೆ. ಮಹಿಳಾ ಬರವಣಿಗೆಯೆಂದು ಮಾತ್ರ ಗುರುತಿಸದೆ ಕನ್ನಡದ ಪ್ರಮುಖ ಕೆಲವೇ ಕಾದಂಬರಿಗಳ ಸಾಲಿನಲ್ಲಿ 'ಬದುಕು' ಕಾದಂಬರಿಯನ್ನು ಥಟ್ಟನೆ ಕೂರಿಸಬಹುದು.

ಮೇಲ್ಮಧ್ಯಮ ವರ್ಗದ ಮಹಿಳೆಯರ ಬದುಕಿನ ಬಗೆಗಿದ್ದ ಒಲವು ನಿಧಾನವಾಗಿ ತನ್ನ ಟ್ರಾಕ್ ಬದಲಿಸಿ ದಲಿತ, ಹಿಂದುಳಿದ ವರ್ಗದ ಮಹಿಳೆಯರ ಬದುಕಿನ ಚಿತ್ರಗಳು ಮಹಿಳೆಯರ ಕೃತಿಗಳಲ್ಲಿ ಮೂಡಿಬರುತ್ತಿರುವುದು ಶ್ಲಾಘನೀಯ. ಮಹಿಳೆಯರ ಕೃತಿಗಳಲ್ಲಿ ಅಂತಹ ಒತ್ತು ಯಾಕೆಂದರೆ ನಮ್ಮಲ್ಲಿ ಒಬ್ಬ ಲೇಖಕನ ಕೃತಿಯನ್ನು ನೋಡುವ ಪರಿಗೂ, ಒಬ್ಬ ಲೇಖಕಿಯ ಕೃತಿಯನ್ನು ನೋಡುವ ಪರಿಗೂ ಸಾಕಷ್ಟು ವ್ಯತ್ಯಾಸವಿದೆ. ಮಹಿಳೆಯೊಬ್ಬಳು ನಿರ್ಭಿಡೆಯಿಂದ ಬರೆಯುವ ಕ್ರಿಯೆಯನ್ನೇ ವಕ್ರವಾಗಿ ನೋಡುವ ಪರಿಪಾಠವೂ ಇದೆ. ದುರಂತವೆಂದರೆ, ಎಲ್ಲವರ್ಗದ ಹೆಣ್ಣುಮಕ್ಕಳಿಗೂ ನಿರ್ಭಿಡೆಯಿಂದ ಬರೆಯಲಾಗದ ಒತ್ತಡಕ್ಕೆ ಅನೇಕ ಕಾರಣವಿರುತ್ತದೆ. ಆಕೆ ಬೆಳೆದ ವಾತಾವರಣ, ಬದುಕುತ್ತಿರುವ ಪರಿಸರ-ಕುಟುಂಬ-ಸಮಾಜ-ಹೀಗೆ. ಸಮಾಜವನ್ನು ಎದುರಿಸುವಾಗ ಗಂಡಿಗಾಗುವ ಅನುಭವಕ್ಕೂ ಹೆಣ್ಣಿನ ಅನುಭವಕ್ಕೂ ಅಜಗಜಾಂತರ, ಈ 21ನೇ ಶ.ದಲ್ಲೂ! ಈ ಭಿನ್ನವನ್ನು ಮೀರಿ ನಿಂತಾಗ ಮಾತ್ರ 'ಬದುಕು'ನಂಥ ಕೃತಿಗಳು ಹುಟ್ಟಿಕೊಳ್ಳುತ್ತವೆ. ಅದು ಎಲ್ಲ ಹೆಣ್ಣು ಮಕ್ಕಳಿಗೂ ಸಾಧ್ಯವಾಗದ್ದು, ಸಾಧ್ಯವಾಗಬೇಕಾಗಿರುವಂಥದ್ದು. ಕೃತಿಯೊಂದು ಪ್ರಕಟವಾದ ನಂತರವೂ ಲೇಖಕನ ಕೃತಿಯೊಂದು ಚರ್ಚೆಯಾಗುವಷ್ಟು ಲೇಖಕಿಯ ಕೃತಿಯೊಂದು - ಅದು ಅತ್ಯುತ್ತಮ ಕೃತಿಯಾಗಿದ್ದಾಗಲೂ - ಚರ್ಚೆಯಾಗುವುದಿಲ್ಲ. ಅಥವಾ ಚರ್ಚೆಯಾದರೂ ಅದರಲ್ಲಿ ಭಾಗವಹಿಸುವವರುಮೂರು

ಮತ್ತೊಂದು ಜನ. ಯಾಕೆ ? ಮುಂದಾದರೂ ಒಳ್ಳೆಯ ಮಹಿಳಾ ಕೃತಿಗಳು ಯಾವ ತಾರತಮ್ಯವೂ ಇಲ್ಲದೆ ಚರ್ಚೆಯಾಗುತ್ತದೆಂಬ ಆಶಾಭಾವನೆಯನ್ನಿಟ್ಟುಕೊಂಡೇ ಸಧ್ಯ ಗೀತಾನಾಗಭೂಷಣರ 'ಬದುಕು' ಕಾದಂಬರಿಯ ಕೇರಿಯಲ್ಲಿ ಒಂದು ಸುತ್ತು ಸುತ್ತುವ.

ಒಂದು ಕಾಲಕ್ಕೆ ಸುಖಾಂತ, ಮನರಂಜನೆಯ ಮಟ್ಟದಲ್ಲಿದ್ದ ಮಹಿಳಾ ಬರವಣಿಗೆ ಕೆಲ ಲೇಖಕಿಯರ ಕೈಯಲ್ಲಿ - ತ್ರಿವೇಣಿ, ಎಂ.ಕೆ.ಇಂದಿರಾ, ವೀಣಾ ಶಾಂತೇಶ್ವರ ಮುಂತಾದವರು- ಭಿನ್ನವಾಗಿ ಮೂಡಿ ಬಂದಿತಾದರೂ ಕೆಳಜಾತಿ ಕೆಳವರ್ಗದ ಮಹಿಳೆಯರ ಬಗೆಗಲ್ಲ. ಆದರೆ ಇತ್ತೀಚೆಗೆ ಬಂದ ದಲಿತ, ಹಿಂದುಳಿದ ಲೇಖಕಿಯರು ತಮ್ಮ ಅನುಭವಗಳನ್ನು ಹೇಳಿಕೊಳ್ಳುವ, ನೋವನ್ನು ದಾಖಲಿಸುವ ಒತ್ತಡಕ್ಕೆ ಒಳಗಾಗಿ, ತಾವು ಮತ್ತು ತಮ್ಮಂಥವರು ಅನುಭವಿಸಿದ ಅಪಮಾನ, ನೋವು, ಸಂಕಟ, ತಿರಸ್ಕಾರ, ಶೋಷಣೆ ಎಲ್ಲವನ್ನು ನಿರ್ಭಿಡೆಯಿಂದ ತೆರೆದಿಡುವ ಸಾಹಸಕ್ಕೆ ಕೈ ಹಾಕಿದ್ದಾರೆ. ಕನ್ನಡ ಸಾಹಿತ್ಯಲೋಕವೇ ಬೆಚ್ಚಿ ಬೀಳುವಂಥ ಗಮನಾರ್ಹ ಕೃತಿಗಳನ್ನು ಕೊಡುತ್ತಿದ್ದಾರೆ.

ಕಲ್ಬುರ್ಗಿ, ಸೊಲ್ಲಾಪುರಗಳ ಸುತ್ತಮುತ್ತಲಿನ ಕೆಳಗೇರಿ, ಹೊಲಗೇರಿ, ಕೊಳೆಗೇರಿ ಜನರ ಬದುಕನ್ನು ನಮ್ಮ ಮುಂದೆ ಪದರುಪದರಾಗಿ 'ಬದುಕು' ಕಾದಂಬರಿ ಬಿಚ್ಚಿಡುತ್ತದೆ. ಇದುವರೆಗೆ ಕಂಡರಿಯರ ಹೊಸ ಬದುಕಿನ ಲೋಕವೇ ಮೇಲ್ಮಧ್ಯಮ ವರ್ಗದವರ ಮುಂದೆ ಕುಣಿದು ಕಾಡಿಸುತ್ತದೆ.

ಕಲ್ಬುರ್ಗಿ ಜಿಲ್ಲೆಯ ಶಿವಳ್ಳಿಯ ಕೆಳಗೇರಿಯ, ಕೆಳವರ್ಗದ ಜನರ ಕಥೆ 'ಬದುಕು' ಕಾದಂಬರಿಯದು. ಮೇಲ್ನೋಟಕ್ಕೆ ಮಲ್ಲಪ್ಪ ಜಮಾದಾರ ಮತ್ತವನ ಕುಟುಂಬದ ಆಗುಹೋಗುಗಳ ಕಥೆಯಂತೆ ಕಂಡರೂ, ಆ ಕುಟುಂಬದ ಸುತ್ತಲಿನ ಕೆಳವರ್ಗದ ದಲಿತರು, ಬಡವರು, ನಿರ್ಗತಿಕರು, ಮೇಲ್ವರ್ಗದ ಅದೇ ಊರಿನ ಸಾಹುಕಾರರು... ಎಲ್ಲರ ಸಂಪರ್ಕದೊಂದಿಗೇ ಕಾದಂಬರಿ ಬೆಳೆಯುತ್ತದೆ.

ಮಲ್ಲಪ್ಪ ಜಮಾದಾರನ ಯೌವ್ವನದ ಪೊಗರು ಹಾದರಕ್ಕಿಳಿದು ಹಾದಿತಪ್ಪಿದರೂ 'ಯಾವ ಇಚಾರದಾಗನೂ ಗಂಡನಿಗೆ ಸರಿಜೋಡಿಯಾಗದ' ಮಲ್ಲವ್ವ ಆತನನ್ನು ಹಾದಿಗೆ ತಂದು ಎರಡು ಹೆಣ್ಣು, ಒಂದು ಗಂಡು ಮಗುವಿನ ತಾಯಿಯಾಗ್ತಾಳೆ. ಹಿರಿಮಗಳು ಶಾಣವ್ವನದು ಏರಿಳಿತವಿಲ್ಲದ ಬದುಕು. 2ನೇ ಮಗಳು ಕಾಶಮ್ಮನ ಹದಿಹರೆಯ, ಅವಳ ಪ್ರೇಮ ಪ್ರಕರಣ, ಬಲವಂತದ ಮದುವೆಯ ನಂತರ ಗಂಡನನ್ನು ಬಿಟ್ಟು ಅದೇ ಊರಿನ ಮೇಲ್ಜಾತಿಯ ಸಾಹುಕಾರನ ಮಗ ಪೇಟೆಯಲ್ಲಿ ಓದಿ ಬಂದ ಲಿಂಗರಾಜನೊಂದಿಗೆ ಓಡಿ ಬರುತ್ತಾಳೆ. ತನ್ನ ಮನಸ್ಸಿಗೆ ವಿರುದ್ಧವಾಗಿ ನಡೆಯದೆ, ತಾನಂದುಕೊಂಡಂತೆ ಬದುಕುವ ದಿಟ್ಟ ಹೆಣ್ಣು ಈ ಕಾಶಮ್ಮ. ಇವಳ ಕಾರಣಕ್ಕಾಗಿಯೇ ಕೊರಗಿ ಸಾಯುವ ಮಲ್ಲಪ್ಪ ಜಮಾದಾರ, ಅಕ್ಕನ ಮಗಳನ್ನೇ ಮದುವೆಯಾಗಿ ಆಗಷ್ಟೇ ಸಂಸಾರದ ಜವಾಬ್ದಾರಿಯನ್ನು ಹರೆಯದ ಪ್ರೀತಿಯ ಕನಸನ್ನು ಕಾಣುತ್ತಿದ್ದ ಕಲ್ಯಾಣಿ ಜೈಲಿಗೆ ಹೋಗಬೇಕಾದ ಅನಿವಾರ್ಯತೆ ಒದಗುತ್ತದೆ.

ಮಲ್ಲಪ್ಪ ಜಮಾದಾರನ ಒಬ್ಬನೇ ಮಗ ಕಲ್ಯಾಣಿಯ ಹರೆಯವೆಲ್ಲ ಜೈಲಿನಲ್ಲಿ ಜೀವಾವಧಿ ಶಿಕ್ಷೆಯೊಂದಿಗೆ ಕೊಳೆಯುತ್ತದೆ. ಹೆಂಡತಿ ಬೆಳ್ಳಿ ಅವನ ಬಿಡುಗಡೆಗಾಗಿ ಪಡುವ ಪಾಡು, ನಿಧಾನವಾಗಿ ಕರಗುವ ಆಸ್ತಿ, ಎಲ್ಲವನ್ನು ನಿಭಾಯಿಸುವ ಬೆಳ್ಳಿಯ ದಿಟ್ಟತನ, ಬಸಿರು-ಬಾಣಂತನ, ಬೆಳೆಯುತ್ತಿರುವ ಮಗಳನ್ನು ತನ್ನ ಹರೆಯದೊಂದಿಗೇ ಭದ್ರವಾಗಿ ಜೋಪಾನ ಮಾಡುವ ಪಾಡಂತೂ ಸೊಗಸಾಗಿ ಮೂಡಿಬಂದಿದೆ. ಇವಳ ಎಲ್ಲ ಕಷ್ಟಕ್ಕೂ ಗಟ್ಟಿಯಾಗಿ ನಿಲ್ಲುವ ಮನೆಮಗನಂತೆಯೇ ಜವಾಬ್ದಾರಿ ಹೊತ್ತು ನಿಭಾಯಿಸುವ ಫತರೂ... ಕಾದಂಬರಿಯ ಆರಂಭದಿಂದ ಕೊನೆಯವರೆಗೂ ಮಲ್ಲಪ್ಪ ಜಮಾದಾರನ ಮನೆಯ ಆಗುಹೋಗುಗಳಿಗೆ ಸಾಕ್ಷೀಪ್ರಜ್ಞೆಯೆಂಬಂತೆ ಇರುವ ಐದು ತಲೆಮಾರುಗಳನ್ನು ಕಂಡ ಹಿರಿ ಜೀವ ನಾಗವ್ವಾಯಿಯ ಪಾತ್ರ... ಒಂದೊಂದು ಘಟನೆಯನ್ನು ಓದುಗರು ಬಿಗಿಹಿಡಿದು ಓದುವಂತೆ ಮಾಡುತ್ತದೆ.

ಜೈಲಿನಿಂದ ವಾಪ್ಪಸ್ಸಾದ ಕಲ್ಯಾಣಿಯ ಕುಟುಂಬ ದುಡಿದರೂ ಅಪ್ಪನ ಕಾಲದ ಹಾಗೆ ಚೇತರಿಸಿಕೊಳ್ಳುವುದಿಲ್ಲ. ಅಪ್ಪನ ಜಮಾದಾರಿಕೆಯನ್ನೆಲ್ಲ ಬಿಟ್ಟುಕೊಟ್ಟ ಕಲ್ಯಾಣಿ ತೀರಾ ಕುಗ್ಗಿಹೋಗುವುದು ಎರಡು ಕಾರಣಕ್ಕಾಗಿ. ಒಂದು : ಓದಿದ ತನ್ನ ಮಗನೇ ಜೈಲಿನಿಂದ ಬಂದ ಎಂಬ ಕಾರಣಕ್ಕಾಗಿ ತುಚ್ಛನಾಗಿ ಕಾಣುವುದು. ಇನ್ನೊಂದು : ಹಾಗೆ ಹಿಂದಿರುಗಿದವನನ್ನು ಊರ ಹಿರಿಯರೆನ್ನಿಸಿಕೊಂಡವರು ತಮ್ಮ ಊರಿಗೆ, ಕುಲಕ್ಕೆ ಮತ್ತೆ ಸೇರಿಸಿಕೊಳ್ಳುವ ನಾಟಕವಾಡಿ ದಂಡ ಹಾಕಿ ನಡೆಸಿಕೊಳ್ಳುವ ರೀತಿಗೆ. ಆರ್ಥಿಕವಾಗಿ, ಮಾನಸಿಕವಾಗಿ ದುರ್ಬಲರಾದ ಕೂಡಲೇ ಅಂಥವರನ್ನು ನಡೆಸಿಕೊಳ್ಳುವ ಉಳ್ಳ ಜನರ ವರ್ತನೆಗೆ ಇದು ಸಾಕ್ಷಿಯಂತಿದೆ. ಕಲ್ಯಾಣಿಯ ದುಃಖದಿಂದಾಗಿ ಬೆಳ್ಳಿಯೂ ಸುಖವಾಗಿ ಬಾಳಲಾರದವಳಾಗುತ್ತಾಳೆ. ಕೊನೆಗೆ ನೆಮ್ಮದಿಗಾಗಿ ಯಾತ್ರೆ ಹೊರಟ ಬೆಳ್ಳಿ-ಕಲ್ಯಾಣಿ ಹಿಂದಿರುಗುವಾಗ ದಾರಿಯಲ್ಲೇ ಅಪಘಾತಕ್ಕೀಡಾಗಿ ಸಾಯುತ್ತಾರೆ.

ಇದು ಮೇಲ್ನೋಟಕ್ಕೆ ಕಾಣುವ ಮಲ್ಲಪ್ಪ ಜಮಾದಾರನ ಕುಟುಂಬದ ಕಥೆಯಾದರೆ, ಈ ಕುಟುಂಬದ ಸಂಪರ್ಕಕ್ಕೆ ಬರುವ ಕೆಳವರ್ಗದ ಬದುಕಿನ ಚಿತ್ರಗಳು, ಅವರದೇ ಆದ ಮೂಢನಂಬಿಕೆಗಳು, ಆಚರಣೆಗಳು, ಜಾತ್ರೆಯ ವಿವರಗಳು, ನಗರದ ಕೊಳೆಗೇರಿಯ ಕಥೆಗಳು, ಅಲ್ಲಿನ ಜಾತ್ರೆಯ ಚಿತ್ರಗಳು,

ಆ ಊರಿಗೆ ವಲಸೆ ಬರುವ ಜನರ ಬದುಕಿನ ಚಿತ್ರಗಳು, ಇವರೆಲ್ಲರ ಬದುಕಿನ ಭಾಗವೇ ಆದ ಕುಡಿತ ಊಟ, ಕಾಮ, ಪ್ರೇಮ, ಹಾದರ, ಇದೆಲ್ಲದರ ಹಸಿವಿನ ತುಡಿತವಂತೂ ತೀವ್ರವಾಗಿದೆ. ಅಷ್ಟೇ ಅಲ್ಲದೆ ಪೊಲೀಸ್ ವ್ಯವಸ್ಥೆ, ಶಿಕ್ಷಣ ವ್ಯವಸಾಯದ ಬಗೆಗಿನ ನಿಲುವು, ಅಲ್ಲಿನ ಬದುಕಿನ ಏರುಪೇರಿನೊಂದಿಗೇ ತಾನೂ ಏರುಪಾರಾಗಿ ಬರುವ ಪ್ರಕೃತಿಯ ಚಿತ್ರಣ, ದೇವರು ಧರ್ಮದ ಹೆಸರಿನಲ್ಲಿ ಹೊಲಗೇರಿ ಹೆಣ್ಣುಮಕ್ಕಳನ್ನು ಜೋಗಣತಿಯರನ್ನಾಗಿಸುವ ಮೇಲ್ವರ್ಗದವರ ಹುನ್ನಾರ (ಅದನ್ನು ಪ್ರತಿಭಟಿಸುವ, ರಾಜೀಮಾಡಿಕೊಳ್ಳುವ, ಅದರಿಂದ ಪಟ್ಟ ಪಾಡಿಗೆ ಮರುಗುವ ಪ್ರತಿಭಟಿಸಿ ರಾಜಿಯಾಗದೆ ಆತ್ಮಹತ್ಯೆಗೆ ಶರಣಾಗುವ ಇಂಥ ಎಷ್ಟೆಲ್ಲ ಜೋಗಣತಿಯರ ಪಾತ್ರ ಚಿತ್ರಣವೂ ಈ ಕಾದಂಬರಿಯಲ್ಲಿದೆ)... ಹೀಗೆ ಏನೆಲ್ಲವೂ - ಬದುಕಿನಲ್ಲಿನ ಎಲ್ಲವೂ ಈ 'ಬದುಕಿ'ನಲ್ಲಿದೆ.

ಎಚ್.ಎಸ್.ಆರ್.ಹೇಳುವಂತೆ, 'ಕೆಳವರ್ಗದ ಸಮುದಾಯದ ಕೇಂದ್ರದಿಂದ ಹೊರಟು ಇಡೀ ಬದುಕನ್ನು - ಸಮಾಜವನ್ನು - ನೋಡುವ ಕ್ರಮ ಈ ಕಾದಂಬರಿಯದು. ಇಂಥದ್ದರ ಪರವಾಗಿದೆಯೆಂದು ಹೇಳಲಾಗದ ಇದರಲ್ಲಿ ನವೋದಯದ ಮಡಿವಂತಿಕೆಯಾಗಲೀ, ನವ್ಯದ ವೈಭವೀಕರಣ, ಲೋಲುಪತೆಯಾಗಲೀ ಅಥವಾ ಎಲ್ಲವನ್ನೂ ಸಂಕೇತಗಳ ಮೂಲಕ ಹೇಳಿ ಮುಚ್ಚಿಡುವ ಪ್ರಯತ್ನವಾಗಲೀ ಇಲ್ಲಿಲ್ಲ. ಇದೊಂದು ದೇಹಗಳ ಆತ್ಮಕಥೆ. ಕುವೆಂಪು ಕಾದಂಬರಿಗಳಲ್ಲಿ 'ನಿಸರ್ಗ'ದ ವರ್ಣನೆಯಿರುವ ಹಾಗೆ ಇಲ್ಲಿ 'ಕಾಮ'ದ ವರ್ಣನೆಯಿದೆ. ಮೇಲ್ವರ್ಗ, ಮಧ್ಯಮವರ್ಗಗಳು ಇದುವರೆಗೂ ಕಂಡರಿಯದ ಹೊಸ ಜಗತ್ತನ್ನ ಕಾದಂಬರಿಗಾರ್ತಿ ಕಂಡರಿಸಿದ್ದಾರೆ. ಕೆಳವರ್ಗದ ಬದುಕಿನ ಜಗತ್ತನ್ನು ಯಾವುದೇ ಮಡಿವಂತಿಕೆಯಿಲ್ಲದೆ ಅಪಾರವಾದ ಆತ್ಮವಿಶ್ವಾಸದೊಂದಿಗೇ ಚಿತ್ರಿಸಿದ್ದಾರೆ. ಇತ್ತೀಚೆಗೆ ಬಂದ ಪ್ರಮುಖ ಐದು ಕಾದಂಬರಿಗಳಲ್ಲಿ ಇದೊಂದು".

"ಇದೊಂದು ವಾಸ್ತವವಾದಿ ಕಾದಂಬರಿ. ಶಿ.ಕಾರಂತ, ಥಾಮಸ್ ಹಾರ್ಡಿ ಮೊದಲಾದವರ ವಾಸ್ತವವಾದಿ ಕಾದಂಬರಿಗಳ ಸಾಲಿಗೆ 'ಬದುಕ'ನ್ನು ಧಾರಾಳವಾಗಿ ಸೇರಿಸಬಹುದು. ಯಾರ, ಯಾವ ಮುಲಾಜುಗಳಿಗೂ ಒಳಗಾಗದೆ ತನಗನ್ನಿಸಿದ್ದನ್ನು ತನ್ನದೇ ಆದ ಪ್ರಾಂತೀಯ ಭಾಷೆಯಲ್ಲಿ ನಿರೂಪಿಸಿರುವ, ಯಾವುದೇ ಮುಚ್ಚು ಮರೆಯಿಲ್ಲದೆ ಬಿಚ್ಚಿಟ್ಟಿರುವ ಪ್ರಯತ್ನ ತೀರಾ ಸಹಜವಾಗಿಯೇ ಮೂಡಿ ಬಂದಿದೆ" ಎನ್ನುವ ಎಲ್.ವಿ.ಶಾಂತಕುಮಾರಿಯವರ ಮಾತು ಸರಿಯಾಗಿಯೇ ಇದೆ.

ಒಟ್ಟಾರೆ, ಪುರುಷ ಪ್ರಧಾನ ವ್ಯವಸ್ಥೆ ಇಂದಿಗೂ ಬಲವಾಗಿ ಬೇರೂರಿರುವ ಹೊತ್ತಿನಲ್ಲಿ ಕೆಳ ಜಾತಿ, ವರ್ಗದ ಮಹಿಳೆಯರಿಗೆ ಶಿಕ್ಷಣ ಇನ್ನೂ ಗಂಭೀರವಾಗಿ ತಲುಪದಿರುವ ಈ ಹೊತ್ತಿನಲ್ಲಿ ಹೀಗೆ ಬರವಣಿಗೆಗೆ ತನ್ನನ್ನು ಒಡ್ಡಿಕೊಳ್ಳುವುದೇ ಒಂದು ಸವಾಲಾಗಿರುವ ಹೊತ್ತಿನಲ್ಲಿ ಹಿಂದುಳಿದ ವರ್ಗಕ್ಕೆ ಸೇರಿದ ಹೆಣ್ಣುಮಗಳೊಬ್ಬಳು ಸೃಜನ ಶೀಲವಾಗಿ ತನ್ನನ್ನು ಬರವಣಿಗೆಗೆ ತೊಡಗಿಸಿಕೊಂಡಿದ್ದಾಳೆಂದರೆ ಅದೊಂದು ದೊಡ್ಡ ಸಾಧನೆಯೇ.

21ನೇ ಶ.ದ ಹೊಸ್ತಿಲಲ್ಲಿ ನಿಂತು ಜಾಗತೀಕರಣ, ಖಾಸಗೀಕರಣ, ಉದಾರೀಕರಣಗಳ ಒತ್ತಡದಲ್ಲಿ ಸಿಲುಕಿರುವ ಭಾರತ ನವ ಹೊಸಹತುಶಾಹಿ ಸಂಸ್ಕೃತಿಯ ಗುಲಾಮತನದಲ್ಲಿ ಸಿಕ್ಕು ನರಳುತ್ತಿರುವುದರಿಂದ (ಇದರ ಪರ, ವಿರೋಧದ ಅಭಿಪ್ರಾಯಗಳೂ ಇವೆ) ಬಿಡಿಸಿಕೊಳ್ಳುವ ಯೋಚನೆಗಳು, ಬೇಕು-ಬೇಡದ ಚರ್ಚೆಗಳು, ಚಿಂತನೆಗಳು ಒಂದೆಡೆ ನಡೆಯುತ್ತಿದ್ದರೆ, ಅದ್ಯಾವುದರ ಪರಿವೇ ಇಲ್ಲದಂತೆ ಅನಕ್ಷರತೆ, ಬಡತನ, ಲಿಂಗ।ಜಾತಿ। ವರ್ಗಗಳ ತಾರತಮ್ಯ, ಧರ್ಮ-ದೇವರ ಹೆಸರಿನಲ್ಲಾಗುತ್ತಿರುವ ಅವಾಂತರಗಳು... ಈ ಇಂಥವೆಲ್ಲ ಸ್ವಾತಂತ್ರನಂತರವೂ ಇನ್ನೂ ಜೀವಂತವಾಗಿರುವುದನ್ನು 'ನಿಜಾಮನ ಕಾಲದ ಕಥೆ'ಯನ್ನೊಳಗೊಂಡ 'ಬದುಕು' ಕಾದಂಬರಿ ನೆನಪಿಸುತ್ತದೆ.

ಮತ್ತೆ ಮತ್ತೆ ಕಾಡುವ ಕೆಲವೇ ಕೃತಿಗಳಲ್ಲಿ 'ಬದುಕು' ಕಾದಂಬರಿ ಕೂಡ ಒಂದು. ಅದನ್ನು ಓದಿಯೇ ಅನುಭವಿಸಬೇಕು. ಇನ್ನಷ್ಟು ಇಂಥ ಕೃತಿಗಳು ಮೂಡಿ ಬರುವಂತಾಗಲಿ.

ಗೀತಾ ಡಿ.ಸಿ
ಅಧ್ಯಾಪಕಿ
ಬೃಂದಾವನ್ ಕಾಲೇಜು,
ಭೂಪಸಂದ್ರ,ಹೆಬ್ಬಾಳ-ಅಂಚೆ
ಬೆಂಗಳೂರು - 94

**ಸೂಚನೆ**

ಪ್ರಿಯ ಓದುಗರೇ,

'ಮಾನಸ'ದ ಸೆಪ್ಟೆಂಬರ್, ಅಕ್ಟೋಬರ್ ಹಾಗೂ ನವೆಂಬರ್ ಸಂಚಿಕೆಗಳನ್ನು ತಾಂತ್ರಿಕ ಕಾರಣಗಳಿಂದ ಪ್ರಕಟಿಸಲಾಗಿಲ್ಲ. ಇದಕ್ಕಾಗಿ ವಿಷಾದಿಸುತ್ತೇವೆ.

- ಸಂಪಾದಕೀಯ ಮಂಡಳಿ

# ಅಪ್ಪನಿಗಾಗಿ

ಶೋಭಾ ಸುರೇಶ ಕುಲಕರ್ಣಿ
ಬೆಳಗಾವಿ

ಕನ್ನಡ ಲೇಖಕಿಯರ ಸಂಘ ಕನ್ನಡ ಸಾಹಿತ್ಯ ಪರಿಷತ್ತಿನ ಸಹಯೋಗದಲ್ಲಿ 'ಸಾಹಿತ್ಯ ವಿಹಾರ' ಮಾಲಿಕೆಯಡಿ 'ಪುಸ್ತಕ ಪರಿಚಯ' ಕಾರ್ಯಕ್ರಮವನ್ನು ದಿನಾಂಕ : 10.10.04 ರಂದು ಕನ್ನಡ ಸಾಹಿತ್ಯ ಪರಿಷತ್ತಿನ ಪಂಪ ಸಭಾಂಗಣದಲ್ಲಿ ಏರ್ಪಡಿಸಿತ್ತು. ಈ ಸಲದ ಆಯ್ಕೆ ಶ್ರೀಮತಿ ಗೀತಾನಾಗಭೂಷಣ ಅವರ 'ಬದುಕು' ಕಾದಂಬರಿ.
ಮುಖ್ಯ ಉಪನ್ಯಾಸಕರು : ಪ್ರೊ.ಎಚ್.ಎಸ್. ರಾಘುವೇಂದ್ರರಾವ್
ಚರ್ಚೆಯಲ್ಲಿ ಭಾಗವಹಿಸಿದವರು : ಪ್ರೊ.ಎಲ್.ವಿ.ಶಾಂತಕುಮಾರಿ, ಗೀತಾ ಡಿ.ಸಿ. ಮತ್ತು ಇಂದಿರಾ ಶಿವಣ್ಣ. - ಸಂ

ಸತ್ತವರು ಸತ್ತಿಲ್ಲ
ಅಪ್ಪ ನನ್ನ ಪ್ರತಿಯೊಂದು ನರನರದಲ್ಲಿ ಬದುಕಿದ್ದಾನೆ.
ದೂರದ ಲೋಕದಲಿದ್ದರೂ ಬಹು ಸನಿಹದಲಿದ್ದಾನೆ.
ಇನ್ನೂ ಕೆಲವರು ನನ್ನ ಸುತ್ತಲಿನವರು
ಬದುಕಿಯೂ ಬದುಕಿಲ್ಲ
ಹತ್ತಿರವಿದ್ದರೂ ಬಹುದೂರ.
ಬಾಳಿನುದ್ದಕ್ಕೂ ಬಹಳಷ್ಟು ಸಂಬಂಧಗಳು
ಸಂಬಂಧವಾಗಲೇ ಇಲ್ಲ.
ಬಹಳಷ್ಟು ಸಂಬಂಧಿಗಳು ಆತ್ಮೀಯರಾಗಲೇ ಇಲ್ಲ.
ಕೆಲವೇ ಕೆಲವರು ಅಪ್ಪನ ಹಾಗೆ ನನ್ನವರೆಂಬ ಭಾಸ

ಬಾಳಿನುದ್ದಕ್ಕೂ ಅಪ್ಪ
ಎಲ್ಲವನ್ನೂ ಸ್ವೀಕರಿಸಿದರು, ಒಂದಿಷ್ಟೂ ಗೊಣಗದೆ
ಆಕಾಶಕ್ಕೆ ಏರಲಿಲ್ಲ, ಪಾತಾಳಕ್ಕೆ ಇಳಿಯಲಿಲ್ಲ
ತಮ್ಮ ಹಾದಿಯ ತುಳಿದರು.
ಸ್ಪಷ್ಟ ನಿಲುವು, ಎಲ್ಲರಲ್ಲೂ ಒಲವು
ಬದುಕಿನುದ್ದಕ್ಕೂ ನಗೆಯೆ ನೀಡಿದ ಕಾಣಿಕೆ.
ಶಾಂತಿ, ಸಮಾಧಾನವೇ, ಆಭರಣ. ಎಷ್ಟೋಜನರ ಬಾಳಿನಲ್ಲಿ
ಜ್ಯೋತಿ ಬೆಳಗಿ, ತಾವೂ ಜ್ಯೋತಿ ಆಗಿ ಹೋದರು
ಇಂದು ಅವರ ನೆನಪೇ
ನನಗೆ ಬಾಳಿನುದ್ದಕ್ಕೂ ಜ್ಯೋತಿ

# ಮೀರಾ ನಾನಲ್ಲ

ಹೆಜ್ಜ ಹೆಜ್ಜೆಗೂ ಹೊಸ ಗೀತೆಯ
ರಚಿಸಲು ಮೀರಾ ನಾನಲ್ಲ.
ದ್ವಾರಕೆಯ ಬೀದಿ ಬೀದಿಯಲ್ಲಿ ತಿರುಗಿ
ತಂಬೂರಿಯ ಮೀಟಲು ಮೀರಾ ನಾನಲ್ಲ
ಕಲ್ಲು ಮಣ್ಣಿನಲ್ಲಿ ಹಗಲು ರಾತ್ರಿ ಮುರಳಿಧರನ
ಕಾಣುವ ತವಕದಿಂದ ಎಲ್ಲ ಬಂಧನವ ಬಿಡಲು
ಮೀರಾ ನಾನಲ್ಲ.

ನಾನೊಬ್ಬ ಸಾಧಾರಣ ಸ್ತ್ರೀ
ಸಂಸಾರದಲ್ಲಿ ಮುಳಿಗೆದ್ದು
ಸಂಧ್ಯಾ ದೀಪದಲ್ಲಿ
ಮುಕ್ತಿಯ ಕಾಣುವ
ನನ್ನ ತವಕ ಸಫಲವಾದೀತೇ ?

ಮಾನಸ ಪತ್ರಿಕೆ ಯಾವ ಸಂಸ್ಥೆಯ, ಸರ್ಕಾರದ ನೆರವಿಲ್ಲದೇ ಪ್ರಕಟವಾಗುತ್ತಿರುವ ಮಹಿಳೆಯರೇ ನಡೆಸುತ್ತಿರುವ ಸ್ವಾಯತ್ತ ಪತ್ರಿಕೆ. ಓದುಗರು ಹಾಗೂ ಸಹೃದಯರು ನೀಡುವ ಆರ್ಥಿಕ ನೆರವೇ ಪತ್ರಿಕೆಯ ಜೀವಾಳ. ಚಂದಾದಾರರಿಗೆ ಚಂದಾ ಅವಧಿ ಮುಕ್ತಾಯವಾದುದರ ಬಗ್ಗೆ ಸೂಚನೆಯನ್ನು ನೀಡಲಾಗುತ್ತದೆ. ಓದುಗರು ತಕ್ಷಣ ಚಂದಾ ನವೀಕರಿಸಬೇಕೆಂದು ಕೋರುತ್ತೇವೆ. ಪತ್ರಿಕೆಯು ಉಳಿದು ಬೆಳೆಯಬೇಕಾದರೆ ಓದುಗರ ಸಹಕಾರ ಅತ್ಯಗತ್ತ.

**ವಾರ್ಷಿಕ ಚಂದಾ : 100 ರೂ**

**ಸಂಸ್ಥೆಗಳಿಗೆ : 150 ರೂ**

ಸಂ.ಮಂಡಳಿ

REGD No. : CPMG/KA/BGE/289/2003 - 05

BOOK-POST
PRINTED MATTER

ವಿಳಾಸ :

ಮಾನಸ

ಪಂಚಾಯಿತಿ ರಸ್ತೆ, ಕಾಡುಗೋಡಿ

ಬೆಂಗಳೂರು - 560 067